# ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ
# ಧಾರವಾಡ

## ನೂತನ ಪ್ರಕಟನೆಗಳು (ಅಚ್ಚಿನಲ್ಲಿವೆ)



೧. **ಬಸವಣ್ಣನವರ ವಚನಗಳು** (ಗ್ರಂಥಾಲಯ ಸಂಸ್ಕರಣ)

ಬಸವಣ್ಣನವರ ಷಟ್‌ಸ್ಥಳದ ವಚನಗಳಲ್ಲದೆ ಬೇರೆ ಬೇರೆ ವಚನಗ್ರಂಥ ಮತ್ತು ಕಾವ್ಯಗಳಿಂದ ಆಯ್ದುಕೊಂಡ ಸುಮಾರು ನಾಲ್ಕು ನೂರು (೪೦೦) ಹೆಚ್ಚಿನ ವಚನಗಳೊಂದಿಗೆ ವಿಸ್ತಾರವಾದ ಪ್ರಸಾವನೆ ವಚನಗಳ ಪಾಠಾಂತರ, ಅಕಾರಾದಿ ಮತ್ತು ಶಬ್ದಕೋಶಗಳನ್ನೊಳಗೊಂಡ ಗ್ರಂಥ. ಹಲವು ಚಿತ್ರಗಳೊಡನೆ ಡೆಮಿ ಅಷ್ಟಪತ್ರಾಕಾರದ ಸುಮಾರು ೪೫೦ ಪುಟ.

೨. **ಪ್ರಭುಲಿಂಗಲೀಲೆ** (ಚಾಮರಸ ಕೃತ) ದ್ವಿತೀಯ ಸಂಸ್ಕರಣ.

ಪಾಠಾಂತರ, ಹಾಗೂ ಪ್ರಸ್ತಾವನೆ; ಶಬ್ದ ಕೋಶಗಳಲ್ಲಿ ಅಧಿಕ ಸುಧಾರಣೆ ಹೊಂದಿದೆ; ಕ್ರೌನ್ ಅಷ್ಟಪತ್ರ ೩೮೦ ಪುಟಗಳು.

೩. **ಬಸವಪುರಾಣ** (ಭೀಮಕವಿ ಕೃತ) ನೂತನ ಸಂಸ್ಕರಣ.

ಪಾಠಾಂತರ ಮತ್ತು ಪ್ರಸ್ತಾವನೆ, ಶಬ್ದಕೋಶಗಳನ್ನು ಒಳಗೊಂಡುದು ಕ್ರೌನ್ ಅಷ್ಟಪತ್ರ ಆಕಾರದಲ್ಲಿ ಒಂದು ಸಾವಿರ ಪುಟದ ಹೊತ್ತಿಗೆ.

೪. **ಶಬರಶಂಕರವಿಲಾಸ** (ಷಡಕ್ಷರಿದೇವ ಕೃತ) ದ್ವಿತೀಯ ಮುದ್ರಣ

ಪಾಠಾಂತರ, ಪ್ರಸ್ತಾವನೆ, ಕಂದವೃತ್ತಗಳ ಅಕಾರಾದಿ, ಶಬ್ದಕೋಶ ವಿವಿಧ ಚಿತ್ರಗಳೊಂದಿಗೆ: ಡೆಮಿ ಅಷ್ಟಪತ್ರ ೧೮೦ ಪುಟಗಳು.

೫. **ಬಸವಣ್ಣನವರ ಷಟ್‌ಸ್ಥಳದ ವಚನಗಳು** ದ್ವಿತೀಯ ಮುದ್ರಣ

ಪ್ರೊ. ಶಿ. ಶಿ. ಬಸವನಾಳರವರ ಶಾಸ್ತ್ರೀಯ ಪರಿಶೋಧನೆ, ವಿದ್ವತ್ ಪೂರ್ಣವಾದ ಪ್ರಸ್ತಾವನೆ, ವಿಸ್ತಾರವಾದ ಶಬ್ದಕೋಶ ವಚನಗಳ ಆಕಾರಾದಿ ಯಿಂದೊಡಗೂಡಿದ ಈ ಗ್ರಂಥವು ಅತ್ಯಲ್ಪ ಕಾಲದಲ್ಲಿ ಪುನರ್ಮುದ್ರಣ ಹೊಂದುವ ಸುಯೋಗವನ್ನು ನೋಡಿದರೆ ಇದರ ಲೋಕಪ್ರಿಯತೆ ಎಷ್ಟೆಂಬುದು ಸುಸ್ಪಷ್ಟವಿದೆ.

೬. **ಹಂಪೆಯ ಹರಿಹರದೇವನ ಕೃತಿಗಳು : ೧. ರಗಳೆಗಳು :**

ವಿ. ಸೂ:— ಗಿರಿಜಾಕಲ್ಯಾಣ, ವೀರಶೈವ ತತ್ತ್ವಪ್ರಕಾಶ ಈ ಎರಡು ಗ್ರಂಥಗಳು ಮುಗಿದಿವೆ; ಪುನರ್ಮುದ್ರಣದ ಯೋಜನೆಯನ್ನು ಮಾಡಲಾಗಿದೆ.

**ಲೈಬ್ರೇರಿಯನ್**

**ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ,**
**ಧಾರವಾಡ**

ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಸಾಹಿತ್ಯ ಸಮಿತಿಯ ಪ್ರಕಟನೆ ೯.

---

ಧಾರವಾಡದ

ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಪ್ರಸಾದನಿಲಯದ

**ಬೆಳ್ಳಿಹಬ್ಬದ ಸವಿನೆನಪಿನ ಪ್ರಕಟನೆ**

ಮಹಾಕವಿ

**ಹಂಪೆಯ ಹರಿಹರದೇವ**

ವಿರಚಿತ

# ರಕ್ಷಾಶತಕ ಮತ್ತು ಪಂಪಾಶತಕ

ಸಂಪಾದಕರು :

**ಶಿ. ಶಿ. ಬಸವನಾಳ ಎಂ. ಎ.,**

ಕನ್ನಡ-ಇತಿಹಾಸ ಪ್ರಾಧ್ಯಾಪಕರು, ಲಿಂಗರಾಜ ಕಾಲೇಜ್, ಬೆಳಗಾವಿ



ಪ್ರಕಾಶಕರು :

ಸಾಹಿತ್ಯ ಸಮಿತಿ

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ

**೧೯೫೨** **ಬೆಲೆ : ೧೨ ಆಣೆ**

**ಪ್ರಕಾಶಕರು :**

**ಶ್ರೀ. ವೀರಭದ್ರಪ್ಪ ರುದ್ರಪ್ಪ ಕೊಪ್ಪಳ,** ಎಮ್. ಎ., ಬಿ. ಟಿ.,
ಲೈಬ್ರೇರಿಯನ್,
**ಸಾಹಿತ್ಯ ಸಮಿತಿ**
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ
ಮನೆ ಸಂ ೯೨೩೦
ಧಾರವಾಡ



ಮೊದಲನೆಯ ಮುದ್ರಣ—೧೯೪೩
ಎರಡನೆಯ ಮುದ್ರಣ—೧೯೫೨



**ಮುದ್ರಕರು :**

**ಶ್ರೀ. ವೀ. ರು. ಕೊಪ್ಪಳ** ಎಮ್. ಎ., ಬಿ. ಟಿ.
ಸುಪರಿಂಟೆಂಡೆಂಟ,
**ತೋಂಟದಾರ್ಯ ಮುದ್ರಣಾಲಯ, ಧಾರವಾಡ.**

# ಮುನ್ನುಡಿ

ಧಾರವಾಡದ " ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಪ್ರಸಾದ ನಿಲಯ "ದ ಬೆಳ್ಳಿಹಬ್ಬವು ೧೯೪೨ ಜನವರಿ ತಿಂಗಳಲ್ಲಿ ಬಹು ವಿಜೃಂಭಣೆಯಿಂದ ಜರುಗಿತು. ಈ ಬೆಳ್ಳಿಹಬ್ಬದ ಸವಿನೆನಪಿಗೆಂದು ಮಹಾಕವಿ ಹಂಪೆಯ ಹರಿಹರ ದೇವನ ಸಮಗ್ರಗ್ರಂಥಗಳನ್ನು ಮುದ್ರಿಸಬೇಕೆಂಬ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ 'ಸಾಹಿತ್ಯ ಸಮಿತಿ'ಯವರ ಆಲೋಚನೆಗೆ ಬೆಳ್ಳಿಹಬ್ಬದ ಕಾರ್ಯಸಮಿತಿ ಯವರು ಒಪ್ಪಿ ಆ ಬಗೆಯ ಒಂದು ನಿರ್ಣಯವನ್ನು ಮಾಡಿದರು. ಸಾಹಿತ್ಯಸಮಿತಿ ಯವರು ಹರಿಹರನ ಗ್ರಂಥಗಳ ಪ್ರಕಟನೆಯನ್ನು ಕುರಿತು ಒಂದು ವಿಸ್ತೃತ ಯೋಜನೆಯನ್ನು ಸಿದ್ಧಪಡಿಸಿ ಬೆಳ್ಳಿಹಬ್ಬದ ಅಂಗವಾಗಿ ನಡೆದ ವೀರಶೈವ ಸಾಹಿತ್ಯ ಗೋಷ್ಠಿಯಲ್ಲಿ ಪ್ರಸಿದ್ಧಿಸಿದರು. ಆ ಯೋಜನೆಯು ಅಲ್ಲಿ ನೆರೆದ ಮಹನೀಯ ರೆಲ್ಲರಿಂದಲೂ ಅಂಗೀಕೃತವಾಗಿ ಚಿತ್ರದುರ್ಗದ ಚಿನ್ಮೂಲಾದ್ರಿ ಬೃಹನ್ಮಠದ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಕೃಪಾಶೀರ್ವಾದಗಳ ಬೆಂಬಲವನ್ನೂ ಪಡೆಯಿತು. ಬೆಳ್ಳಿಹಬ್ಬ ಸಮಾರಂಭದ ಕಾಲದಲ್ಲಿಯೇ ಶ್ರೀ ಶಿವಯೋಗಿಗಳ ಕೃಪೆಯಿಂದ ಧನಸಂಚಯದ ಕಾರ್ಯವೂ ನಡೆಯಿತು.

ಇತ್ತ ಗ್ರಂಥಸಂಸ್ಕರಣ, ಸಂಪಾದನೆ ಮೊದಲಾದ ಕಾರ್ಯಗಳಿಗಾಗಿ ಪಂಡಿತರ, ಅನುಭವಿಕರ, ಉತ್ಸಾಹಿಗಳ ಸಮಿತಿಯೊಂದು ಏರ್ಪಾಡಾಗಿ ಕಾರ್ಯೋನ್ಮುಖವಾಯಿತು. ಈ ಗ್ರಂಥಪ್ರಕಟನೆಯಲ್ಲಿ–ಪಾಠಾಂತರ, ಅಡಿಟಿಪ್ಪಣಿ, ಶಬ್ದಕೋಶ ಗಳನ್ನೊಳಗೊಂಡ ರಗಳೆಗಳ ಸಮಗ್ರ ಆವೃತ್ತಿಯೊಂದಲ್ಲದೆ ಬರಿಯ ಮೂಲವುಳ್ಳ–ಆದರೂ ಶುದ್ಧವಾಗಿ ಪರಿಷ್ಕೃತವಾದ–ಒಂದೊಂದೇ ರಗಳೆಯ ಕಿರುಹೊತ್ತಿಗೆಗಳನ್ನೂ ಪ್ರಸಿದ್ಧಿಸಲಾಗುವುದು. ಇದೀಗ ಓದುಗರ ಕೈಸೇರಿರುವ ಈ " ರಕ್ಷಾಶತಕ-ಪಂಪಾಶತಕ "ಗಳು ಅಂತಹ ಕಿರುಹೊತ್ತಿಗೆಯ ಮಾದರಿ. ಆದರೆ ಓದುಗರ ಅನುಕೂಲಕ್ಕಾಗಿ ಕಠಿನ ಶಬ್ದಗಳ ಕೋಶವನ್ನೂ ಜೋಡಿಸಲಾಗಿದೆ. ಹಲವು ಪ್ರತಿಗಳ ಸಹಾಯದಿಂದ ಈ ಗ್ರಂಥವು ಶೋಧಿತವಾಗಿ ಮುದ್ರಿತವಾಗಿರುವುದರಿಂದ ಸಕಲಜನಾದರಣೀಯವಾಗುವುದೆಂಬ ಆಸೆಯಿದೆ.

ಧಾರವಾಡ
೧ ಜುಲೈ, ೧೯೪೩

**ಶಿ. ಶಿ. ಬಸವನಾಳ**
ಅಧ್ಯಕ್ಷ, ಸಾಹಿತ್ಯ ಸಮಿತಿ

# ಕವಿ ಪರಿಚಯ

ಕನ್ನಡ ಸಾಹಿತ್ಯಪ್ರಪಂಚದಲ್ಲಿ ಹರಿಹರನು ಅಮೋಘವಾದ ಶಕ್ತಿಯುಳ್ಳ ಕವಿಯು. ಭಕ್ತನ ಉತ್ಕಟ ಭಾವ, ಕವಿಯ ಶಕ್ತಿಯುತ ವಾಣಿ ಇವುಗಳ ಸಮರಸ ಆತನ ಕಾವ್ಯಗಳಲ್ಲಿ ಕಂಡುಬರುತ್ತಿದೆ. ಚಂಪೂಸಂಪ್ರದಾಯದ ಲಕ್ಷಣಗಳೆಂಬ ಹೊನ್ನ ಸಂಕಲೆಯಿಂದ ಕನ್ನಡ ಕಾವ್ಯವನಿತೆಯನ್ನು ಬಿಡುಗಡೆ ಮಾಡಿದ ಕೀರ್ತಿ ಹರಿಹರನದು. ಭಾರವಾದ ತೊಡವುಗಳಿಂದ ಕೊರಗುತ್ತಿದ್ದ ಕನ್ನಡ ಕಾವ್ಯವನಿತೆಯ ಭಾರವನ್ನು ಇಳುಹಿದವನು ಹರಿಹರ. ಹಾಗೆ ಭಾರ ಇಳಿಸಿ ಅವಳಿಗೆ ಪುಷ್ಟಿಯನ್ನಿತ್ತು ಅವಳನ್ನು ಬೆಳಸಿ ನವೀನವಾದ–ಆದರೆ ಭಾರದಲ್ಲದ–ರೀತಿಯಲ್ಲಿ ಅಲಂಕರಿಸಿ ಹಂಪೆಯ ಪಂಪಾಪತಿಗೆ ತಕ್ಕ ವಧುವನ್ನಾಗಿ ಮಾಡಿದವನು ಈ ಭಕ್ತಕವಿ.

ಹರಿಹರದೇವನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯೋದ್ದೇಶ, ಸಾಹಿತ್ಯರೂಪ, ಭಾಷಾಸ್ವರೂಪ ಹೀಗೆ ಮೂದೆರನಾದ ಕ್ರಾಂತಿಗೆ ಕಾರಣ ನಾಗಿದ್ದಾನೆ.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ |
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾ- ||
ನನವರತಂ ಪೊಗಲ್ದು ಕೆಡಬೇಡಲೆ ಮಾನವ ನೀನಹರ್ನಿಶಂ ।
ನೆನೆ ಪೊಗಲರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ||

ಎಂಬ ಪದ್ಯದಿಂದ ಈತನ ಕಾವ್ಯೋದ್ದೇಶ ವ್ಯಕ್ತವಾಗುತ್ತಿದೆ. ಈತನ ಈ ಸಂಪ್ರದಾಯವನ್ನೇ ಮುಂದಿನ ಎಲ್ಲ ವೀರಶೈವ ಕವಿಗಳು ಅನುಸರಿಸಿದ್ದಾರೆ.

ವಸ್ತುಕ ಕಾವ್ಯದಿಂದಲೇ ಕವಿಯ ಕೀರ್ತಿ ಹೆಚ್ಚುವುದೆಂಬ ನಂಬುಗೆ ಇದುವರೆಗೆ ಬಳೆದು ಬಂದಿತ್ತು. ಹರಿಹರದೇವನು ಅದನ್ನು ಹೊಡೆದೋಡಿಸಿ ಹೃದಯಂಗಮವಾದ ರಗಳೆಗಳನ್ನು ರಚಿಸಿದನು; ಷಟ್ಪದಿಗಳಿಗೆ ಹಾದಿ ಹಾಕಿಕೊಟ್ಟನು. ಈತನಿಂದಲೇ ಕನ್ನಡ ಕಾವ್ಯನಂದನದಲ್ಲಿ ವರ್ಣಕ ಕಾವ್ಯಗಳು ಸೊಗಸಿನ ಪುಷ್ಪಗಳಾಗಿ ಅರಳ ತೊಡಗಿದುವು.

ನೋಡ:ವೊಡೊಂದಕ್ಕರಮದು |
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನುಂ ||
ಕೂಡೆ ಕವಿತತಿ ವಿಚಾರಿಸ |
ಬೇಡದಱಿಂ ಱಱ-ಕುಳ-ಕ್ಷಳಂಗಳನಿದಱೊಳ್ ||

ಎಂಬ ಪದ್ಯದಲ್ಲಿ ಹರಿಹರನ ಧೀರತನದ ಹೊಸ ಹಾದಿ ಕಂಡುಬರುತ್ತಿದೆ. ಱಟಿ, ಕುಳ, ಕ್ಷಳಗಳ ತೊಡಕನ್ನು ತೊಡೆದು ಹಾಕಲು ಮುಂಬಂದ ಎದೆಗಾರನಿವನು. ರಗಳೆಗಳಲ್ಲಿ ಹೊಸ ರೀತಿಯ ಭಾಷೆಯನ್ನು ಅನುಸರಿಸಿ ಹರಿಹರನು ಕನ್ನಡ ಭಾಷೆಯ ಹೊಸ ಸ್ವರೂಪಕ್ಕೆ ಕಾರಣನಾಗಿದ್ದಾನೆ.

ಹರಿಹರನು ವೀರಶೈವರಲ್ಲಿ ಅಗ್ರಕವಿ; ಪೂಜ್ಯಕವಿ. ಪಂಪನಿಗೆ ಜೈನಕವಿಗಳು ತಮ್ಮಕಾವ್ಯಗಳಲ್ಲಿ ಸಲ್ಲಿಸಿದ ಗೌರವವನ್ನು ಈತನಿಗೆ ಮುಂದಿನ ವೀರಶೈವ ಕವಿಗಳು ಸಲ್ಲಿಸಿದ್ದಾರೆ. ಈತನು ವರ್ಣಕ ಕಾವ್ಯಸಂಪ್ರದಾಯಕ ಆದಿಕವಿಯೂ ಅಹುದು.

ಹರಿಹರನು ಪಂಪಾಕ್ಷೇತ್ರದವನು. ದ್ವಾರಸಮುದ್ರದ ಅರಸರಲ್ಲಿ ಕರಣಿಕನಾಗಿದ್ದನು. ಮನುಜರ ಸೇವೆ ಬೇಡವೆನಿಸಿದ್ದರಿಂದ ಹಂಪೆಯಲ್ಲಿಯೇ ನೆಲಸಿ ಕಾವ್ಯ ರಚಿಸಿದನು. "ಉಭಯಕವಿಶರಭಭೇರುಂಡ" ನಾದ ರಾಘವಾಂಕನು ಈತನಿಗೆ ಸೋದರಳಿಯನೂ ಶಿಷ್ಯನೂ ಆಗಿದ್ದನು. ಇವರಿಬ್ಬರೂ ಕೆರೆಯಪದ್ಮರಸನೂ ಸಮಕಾಲೀನರೆಂದೂ ಅವರ ಕಾಲ ೧೧೬೫ ಎಂದೂ ಕವಿಚರಿತೆಕಾರರ ಹೇಳಿಕೆ. ಡಾ. ವೆಂಕಟಸುಬ್ಬಯ್ಯನವರು ಹರಿಹರನ ಕಾಲವನ್ನು ಒಂದು ಶತಮಾನ ಮುಂದೆ ಒಯ್ಯುತ್ತಾರೆ. ಗೋವಿಂದ ಪೈ ಅವರು ಕವಿಚರಿತ್ರೆಕಾರರ ಅಭಿಪ್ರಾಯವೇ ಸರಿಯೆಂದು ವಾದಿಸುತ್ತಿದ್ದಾರೆ. ಪ್ರೊ.ಕುಂದಣಗಾರ ಮತ್ತು ಪ್ರೊ.ಮಾಳವಾಡರವರು ಹರಿಹರನ ಕಾಲ ೧೨೧೬ ಎಂದು ಸಾಧಿಸಲು ಯತ್ನಿಸಿದ್ದಾರೆ. ಬಸವಣ್ಣನವರು, ಅಲ್ಲಮ ಪ್ರಭು, ಅಕ್ಕ ಮಹಾದೇವಿ ಇವರನ್ನು ಕುರಿತು ರಗಳೆಗಳನ್ನು ರಚಿಸಿರುವುದರಿಂದ ಈ ಕವಿ ಅವರಿಂದ ಈಚೆಯವನೆಂದೂ, ಈತನ ಗಿರಿಜಾಕಲ್ಯಾಣದೊಳಗಿನ ಕೆಲ ಪದ್ಯಭಾಗಗಳು ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಸಿಕ್ಕುವುದರಿಂದ ಆತನಿಗಿಂತ ಮೊದಲಿನವನೆಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು.

ಈ ಕವಿಯು ಗಿರಿಜಾಕಲ್ಯಾಣ, ಪಂಪಾಶತಕ ಮುಡಿಗೆಯ ಅಷ್ಟಕ, ರಕ್ಷಾಶತಕ ಎಂಬ ಗ್ರಂಥಗಳನ್ನು ಅಲ್ಲದೆ ನೂರಿಪ್ಪತ್ತು ಶಿವಶರಣರ ರಗಳೆಗಳನ್ನೂ ಬರೆದಿದ್ದಾನೆ.

ಹರಿಹರನು ಹಿರಿಯ ಕವಿ, ಭಕ್ತ, ಕ್ರಾಂತಿಪುರುಷ. ಈ ಮಹಾಕವಿಯ ಪಾಂಡಿತ್ಯದಿಂದೊಡಗೂಡಿದ ಪ್ರತಿಭೆ, ಈ ಶ್ರೇಷ್ಠಭಕ್ತನ ತಲ್ಲೀನತೆ, ಈ ಎದೆಗಾರ ಕ್ರಾಂತಿಪುರುಷನ ಭಾಷೆಯ ಇಂಪು, ಇವುಗಳ ಮುಪ್ಪುರಿಯು ಕನ್ನಡಿಗರಿಗೆ ಎಂದೂ ಬತ್ತದ ಸೊಗಸಿನ ಬುಗ್ಗೆಯಾಗಿದೆ.

# ಪ್ರಕಾಶಕರ ಎರಡು ಮಾತುಗಳು

ಮಹಾಕವಿ ಹಂಪೆಯ ಹರಿಹರದೇವನ ಕೃತಿಗಳಲ್ಲಿ ಈಗ ಪ್ರಕಟವಾಗಿರುವ ರಕ್ಷಾಶತಕ ಮತ್ತು ಪಂಪಾಶತಕ ಇವು ಶತಕಸಾಹಿತ್ಯದ ಇತಿಹಾಸದಲ್ಲಿ ಅಗ್ರಸ್ಥಾನವನ್ನು ಪಡೆದಿವೆ. ವೀರಶೈವ ಕವಿಗಳಲ್ಲಿ ಹಂಪೆಯ ಹರೀಶ್ವರನು ಆದಿಕವಿಯಾಗಿರುವಂತೆ ಶತಕಸಾಹಿತ್ಯ ರಚನೆಯಲ್ಲಿಯೂ ಆ ಅಗ್ರಸ್ಥಾನವನ್ನು ಹೊಂದಿರುವುದು ಹೆಮ್ಮೆಯ ಮಾತಾಗಿದೆ.

ಮೊದಲನೆಯ ಮುದ್ರಣದಲ್ಲಿ ಕವಿಪರಿಚಯದೊಂದಿಗೆ ಮೂಲಶತಕಗಳನ್ನೂ ಪ್ರಕಟಿಸಿ ಅದಕ್ಕೆ ಶಬ್ದಕೋಶವನ್ನು ಜೋಡಿಸಲಾಗಿದ್ದಿತು. ಈ ಶತಕ ಗ್ರಂಥವನ್ನು ಮೈಸೂರ ವಿಶ್ವವಿದ್ಯಾಲಯದವರು ಬಿ. ಎ. ಪರೀಕ್ಷೆಗೂ ಕರ್ನಾಟಕ ವಿಶ್ವವಿದ್ಯಾಲಯದವರು ಎಮ್. ಎ. ಪರೀಕ್ಷೆಗೂ ಪಠ್ಯಪುಸ್ತಕವೆಂದು ನೇಮಿಸಿದುದಕ್ಕಾಗಿ ಇದನ್ನು ಪಾಠಾಂತರ ಸಮೇತ ಮುದ್ರಿಸಿ ಪ್ರಕಟಿಸುವ ಅವಕಾಶ ದೊರೆಯಿತು. ಉಭಯ ವಿಶ್ವವಿದ್ಯಾಲಯದ ಕನ್ನಡ ಪಠ್ಯಪುಸ್ತಕ ಸಮಿತಿಯವರಿಗೆ ನಾವು ಅಭಾರಿಯಾಗಿದ್ದೇವೆ.

ಈ ಪುಸ್ತಕದ ಸಂಪಾದಕರೂ ಸಾಹಿತ್ಯಸಮಿತಿಯ ಕಾರ್ಯಾಧ್ಯಕ್ಷರೂ ಆದ ಪ್ರೊಫೆಸರ ಶಿ. ಶಿ. ಬಸವನಾಳ ಎಮ್. ಎ. ಅವರು ದಿನಾಂಕ ೨೨-೧೨-೧೯೫೧ ರಲ್ಲಿ ಲಿಂಗೈಕ್ಯರಾದರು. ಇದೊಂದು ತುಂಬಬಾರದ ಹಾನಿ. ಆದರೂ ಈಗ ನಾವು ಅವರು ಹಾಕಿಕೊಟ್ಟ ಮಾರ್ಗದಲ್ಲಿ ಈ ಪ್ರಕಟನೆಯ ಕಾರ್ಯವನ್ನು ಮುಂದುವರಿಸುತ್ತಿದ್ದೇವೆ. ಈ ಹೊತ್ತಿಗೆಯನ್ನು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯ ಒಂಬತ್ತನೆಯ ಪ್ರಕಟನೆಯೆಂದು ಪ್ರಸಿದ್ಧಿಸಿದ್ದೇವೆ. ಕನ್ನಡ ಸಾಹಿತಿಗಳು ಇದನ್ನು ಸ್ವಾಗತಿಸುವರೆಂದು ಆಶಿಸಲಾಗಿದೆ.

೨೪-೮-೧೯೫೨
ಆನಂದ ಸಂ॥ ಭಾದ್ರಪದ ಶುದ್ಧ ೪
ಧಾರವಾಡ

ವೀ. ರು. ಕೊಪ್ಪಳ
ಲೈಬ್ರೇರಿಯನ್
ಸಾಹಿತ್ಯ ಸಮಿತಿ,
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ.

|| ಶ್ರೀ ಪಂಪಾವಿರೂಪಾಕ್ಷ ಲಿಂಗಾಯನಮಃ ||

# ರಕ್ಷಾಶತಕಂ

ಶ್ರೀಮದ್ ಗಂಗಾತರಂಗಾವೃತವಿಮಲಜಟಾಜೂಟ ಸರ್ವೇಶ ಗೌರೀ-
ವಾಮಾಂಗಾಲಿಂಗನಾಲಿಂಗಿತ ಘನಮಹಿಮೋದಾರಚಾರಿತ್ರ ಚಂಚತ್-
ಸೋಮಾರ್ಧೋತ್ತಂಸ ಸಂಸಾರಜಲಧಿವಡಬಾಕಾರಸಾಕಾರ ಭಕ್ತಿ[1]-
ಪ್ರೇಮಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧

ತಿರುಗುತ್ತೆಂಬತ್ತುನಾಲ್ಕುಂ ದಶಶತಶತಜನ್ಮಂಗಳೊಳ್ ಪುಟ್ಟಿ ನಿಮ್ಮಂ-
ದಿರವಂ ತಿಂತುಟೆಂದೇನುಮನಱಿಯದೆ ಮಣ್ಣಾಗಿ ಕಲ್ಲಾಗುತುಂ ದು-
ರ್ಧರಗುಲ್ಮಂ ಭೂರಿಭೂಜಂ ಪುೞು ಖಗ-ಮೃಗವಾಗುತ್ತುಮೆಂತ[2]ಕ್ಕೆ ಬಂದೆಂ
ನರಜನ್ಮಕ್ಕಯ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨

ಬಸಿಱೊಳ್ ಮಾಸೊತ್ತಿ ನೆತ್ತರ್ ಪಸರಿಸಿ ಕರುಳಿಂ ಸುತ್ತಿ ಮೂತ್ರಂ ಪುರೀಷಂ
ಮುಸುಕಿಟ್ಟಿಲ್ಲಂ[3]ಗದೊಳ್ ಕೆತ್ತಿರಲುದರಶಿಖಿಜ್ವಾಲೆಯಿಂದತ್ತಮಿತ್ತಂ
ಕುಸಿಯುತ್ತುಂ ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾ-
ಯಸಮಂ ಚಿತ್ತಯ್ಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩

ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೊ-
ಯ್ದಾನಾರೆಂದೇನುಮಂ ಭಾವಿಸದೆ ಬಧಿರನಂತಂಧನಂತಿರ್ದು ಮತ್ತಂ
ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱೆನಿನ್ನಾಱೆನಯ್ಯೋ
ಆನಂದಾಂಭೋಧಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪

ಪಿರಿದೊಂದಜ್ಞಾನದಿಂ ಯೌವನವಿಕಳತೆ ಪೈದೋಱೆ ಕಾಂತಾನಿವಾಸಾಂ-
ತರದೊಳ್ ಶ್ವಾನಂಗೆ ಹೇಹಂದಿಗೆ ಕಪಿಗೆಣೆಯಾಗಿರ್ದು ಬೇಳಾ[4]ಗುತುಂ ತತ್-
ಕರಣಕ್ಕಾಳಾಗಿ ಹಾಳಾಗುತೆ ಬಱುದೊಱೆವೋ[5]ದೆಂ ಬಳಲ್ದೆಂ ಬಿಗುರ್ತೆಂ
ಮರುಳಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫

---

೧ ಕ್ತ (ಪಾ) ೨ ಮಂತ್ಯ (ಪಾ) ೩ ಕುತ್ತೆತ್ತಂ (ತಾ); ಕಿರ್ದೆತ್ತಂ (ಪಾ)
೪ ಬೆಳ್ಪಾ (ಪಾ) ೫ ಯಾ (ಪಾ).

ಸ್ತ್ರೀಮಾತ್ರಂ ನೇತ್ರದತ್ತಲ್ ಸುಳಿದೊಡೆ ಮನವಿಭ್ರಾಗಮಾಗುತ್ತೆ ತಾಪ-
ಸ್ತೋಮಮಂ ಕೈಮಿಱಿ[1]ಲಜ್ಜಾರಸಮುಡುಗಿ ವಿವೇಕಂ ಕಳ[2]ಲ್ದೋಡಿ ರಾಗಂ
ಕೈಮಿಕ್ಕಾನಾವನೇನೆಂದಱಿಯದ ತೆಱನಂ ಮಾಡುತಿರ್ದಪ್ಪುದಿಂತೀ
ಕಾಮಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬

ಏಪ್ಪೊಳ್ತುಂ ಗಾತ್ರಮಂ ಶೋಷಿಸುತೆ ಕರಣಮಂ ಕಂದಿಸುತ್ತುಂ ನಿರರ್ಥಂ
ತಾಪವ್ರಾತಕ್ಕೆ ಪಕ್ಕಾಗಿಸುತಮಳಗುಣಸ್ತೋಮಮಂ ಖಂಡಿಸುತ್ತುಂ
ಪಾಪಪ್ರಾರಂಭಕರ್ತೃತ್ವಮನೆನಗೆನಿಸಂ ಮಾಡುತಿರ್ದಪ್ಪುದಿಂತೀ
ಕೋಪಂ ಶಾಂತಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭

ಧನಮಂ ಸ್ತ್ರೀಪುತ್ರರಂ ಕೆಮ್ಮನೆ ಕಿಡುವ ಗೃಹಕ್ಷೇತ್ರಮಂ ಮಿತ್ರರಂ[3] ವ-
ಸ್ತ್ರನಿಕಾಯಾಕಲ್ಪಮಂ ಮುಂತೆನಗೆನುತೆ ಕರಂ ಕಾಂಕ್ಷೆಯಿಂ ಕೂರ್ಮೆಯಿಂದೆ-
ಳ್ಪನಿತುಂ ಪುಣ್ಯಕ್ಕೆ ಮಾಡಲ್ ಕುಡದೆ ಕಿಡಿಸುವೀ ಲೋಭಮಂ ದಾನಿ ನೀಂ ಭೇ-
ದನೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮

ದೇಹೋಹಂ ಎಂದು ಮಕ್ಕಳ್ ಮನೆ ಧನವಳಿಯಲ್ ಕಂದಿಸುತ್ತುರ್ಬಿ ವಾಶಾ-
ವ್ಯೂಹಕ್ಕಿಂಬಾಗಿಸುತ್ತುಂ ನೆನೆದು ಮಱುಗಿಸುತ್ತುಂ ಮುಸುಂಕಿರ್ದ ಮಿಥ್ಯಾ-
ಸ್ನೇಹಾರಂಭಾನುಕೂಲಂ ಸುಡಿಗೆಡೆಗುಡದಿರ್ದಪ್ಪುದೊತ್ತಂಬದಿಂದೀ
ಮೋಹಂ ಮೋಹಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯

ಅದನೇನೆಂಬೆಂ ಗುಣವ್ರಾತಮನೆ ಪೞಿಯುತುಂ ವಿದ್ಯೆಯಂ ಖಂಡಿಸುತ್ತುಂ
ಕದಡುತ್ತುಂ ಚಿತ್ತಮಂ ಬುದ್ಧಿಯನುಱದಱಿಯಟ್ಟುತ್ತೆ ಕಾಯ್ದಪ್ಪುದೆನ್ನೀ
ಮದಮಾತಂಗಂ ಮಹಾರೋಹಕ ನಿಜಚರಣಸ್ತಂಭದೊಳ್ ಕಟ್ಟಿ ಸೈತಿ-
ಟ್ಟು ದಯಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦

ಪರವೈಶ್ವರ್ಯಕ್ಕಸೂಯಂಗೊಳುತೆ ಪರರ ಬಲ್ಪಿಂಗೆ ಸಂತಾಪಿಸುತ್ತುಂ
ಪರರಿಂದಂ ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದುಂ
ಪರಚಿಂತಾಕ್ಷೋಭೆಯಿಂ ಮತ್ಸರದೊಡನೆ ಕರಂ ಗಾಸಿಯಾದಪ್ಪೆನೀ ಮ-
ತ್ಸರಮಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೧

---

೧ ಮಿಕ್ಕೇರಿ (ಪಾ) ೨ ಕನ (ಪಾ) ೩ ಧಾನ್ಯಮಂ (ಪಾ)

ಮನವೆನ್ನಂ ದುರ್ವಿಕಾರಕ್ಕೆಳೆದಪುದು ಮನಂ ಮಾನಮಂ ನುರ್ಗಿದತ್ತೀ
ಮನವಾಶಾವಹ್ನಿಯೊಳ್ ನೂಂಕಿದಪುದು ಮನವೀ ಮಾಯೆಯಂ ಬಿಟ್ಟು ನಿಮ್ಮಂ
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ ಕಾರುಣ್ಯವಾರಾಶಿಯೆನ್ನೀ
ಮನಮಂ ಸಯ್ತಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೨

ಪ್ರತ್ಯಕ್ಷಂ ಸತ್ತು ಹೋಗುತ್ತಿದೆ ನರನಿಕರಂ ತಾನಿದಂ ಕಂಡು ಕಂಡುಂ
ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿ-
ಪ್ಪತ್ಯಂತಂ ಗರ್ವಿಪೆನ್ನೀ ಮನಕೆ ಪರಮ ವೈರಾಗ್ಯಮಂ ಕೊಟ್ಟು ಸತ್ಯಂ
ಸತ್ಯಂ ಸತ್ಯಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೩

ಇನಿತುಂ ವೈರಾಗ್ಯದತ್ತಲ್ ನೆನೆಯದೆ ಮದದತ್ತಲ್ ಮಹಾಮೋಹದತ್ತಲ್
ಧನದತ್ತಲ್ ಧಾನ್ಯ[೧] ದತ್ತಲ್ ಸತಿಸುತಪಿತರತ್ತಲ್ ಸದಾ ಲೋಭದತ್ತಲ್
ನೆನೆಯುತ್ತಿರ್ದಪ್ಪುದೆನ್ನೀ ಮನವಿದನೆಡೆಗೊಂಡಳ್ಕಱಿಂ ದೇವ ನೀವಿಂ-
ತೆನಿತುಂ ತೀವಿರ್ದು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೪

ಸುವಿಚಾರಕ್ಕೊರ್ಮೆಯುಂ ಸೇರದು ನಡೆಯಿಪುದತ್ಯಾಗ್ರಹ[೨]ವ್ಯಾಪ್ತಿಯಿಂ ತಾ-
ನವಿಚಾರಕ್ಕೆಂದೊಡೆಂಟಂ ನಿಮಿರ್ವುದು ಬಯಲಂ ಭಾವಿಸುತ್ತಿರ್ಪುದಾತ್ಮೋ-
ದ್ಭವಮೂಲಚ್ಛೇದನೋಪಾಯವನೆಣಿಸದು ಮದ್[೩]ಬುದ್ಧಿಯೀ ಬುದ್ಧಿಯಂ ಶಂ-
ಭುವೆ ಸಂತಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೫

ಇನಿತುಂ ತಾನಲ್ಲದಾರಂ ಬಗೆಯದು ಮದಮಂ ಗರ್ವಮಂ ಕೂಡಿಕೊಂಡಿ-
ರ್ದನಿತುಂ ಮುಂಗಾಣದತ್ಯುದ್ಧತತರಮುಖವಾಗಿರ್ಪುದೋರಂತೆ ವಿದ್ವ-
ಜ್ಜನಮಂ ಕೈಕೊಳ್ಳದೆನ್ನೀ ಮನದೊಡತರಣ[೪]ಹಂಕಾರವಿಂತಿಂತಿದಂ ದೇ-
ವನೆ ನೀಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೬

ಧನದೊಳ್ ಧಾನ್ಯಂಗಳೊಳ್ ಭೂಷಣವಿತತಿಗಳೊಳ್ ಪುತ್ರಸಂತಾನದೊಳ್ ಭೋ-
ಗನಿಕಾಯಭ್ರಾಂತಿಯೊಳ್ ಕಾಂತೆಯರ ತನುಸುಖಚ್ಛಾಯೆಯೊಳ್ ಮಾಯೆಯೊಳ್
ನಿಂ-
ದೆನಸುಂ ನಟ್ಟಿರ್ದ ಮಚ್ಚಿತ್ತಮನಭವ ನಿಜಾಂಘ್ರಿದ್ವಯಧ್ಯಾನಸಾ[೫]ನಂ-
ದನಿವಾಸಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೭

---

೧ ಕಾಮ (ಪಾ) ೨ ತುರ (ಪಾ) ೩ ದುರ್ (ಪಾ) ೪ ಳಗಣ (ಪಾ) ೫ ದಾ (ಪಾ)

ಓರಂತೀ ದೇಹಮುಂ ರಕ್ಷಿಸುವತಿಭರದಿಂದುಳ್ತು ತೆತ್ತುಂ ಸತೇಜ-
ಕ್ಕಾರೇನಂ ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟೆಯುಂ[೧] ಪೊತ್ತು ಸಂಸಾ-
ಗಾರಂಭಂಗೆಯ್ದು ದುಃಖಕ್ಕಲಸಿ ಮಱುಗಿ ನಿಮ್ಮಂಘ್ರಿಯಂ ಪೊರ್ದಿದೆಂ ಸ-
ತ್ಕಾರಂಭಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೮

ಅವಿಚಾರಂ ಮಿಕ್ಕು ಲಾಭಂಬಡೆವತಿಭರದಿಂ ಸುತ್ತಿ ದೇಶಂಗಳೊಳ್ ವಿಂ-
ಧ್ಯ[೨]ವಿತಾನಪ್ರಾಂತದೊಳ್ ತಿಱನೆ ತಿರುಗಿ ಮೊದಲ್ಗೆಟ್ಟು ಬೆಂಬಿಳ್ದು ದುಃಖ-
ಱ
ವ್ಯವಹಾರಕ್ಕಳ್ಕಿ ನಿಮ್ಮೀ ಚರಣಯುಗಳಮಂ ಪೊರ್ದಿದೆಂ ಭಕ್ತವೃಂದೋ-
ತ್ಸವಕಲ್ಪೋರ್ವೀಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೯

ಅವನಿಂತಾರಾದೊಡಂ ಪಲ್ಗಿರಿದು ಪಿ[೩]ರಿದು ಬಾಯಿಂದೆ ದೈನ್ಯಾಕ್ಷರಂ ಸಂ-
ಭವಿಸುತ್ತಿನ್ನಾಳ್ದ ಸಂದೇಶಮನೆ ಕರುಣಿಸೆಂದಲ್ಲಿ ಮರ್ತ್ಯಂಗೆ ಸಾವು-
ತ್ತಿವೆ ಪುಟ್ಟುತ್ತಿರ್ಪ ಸೇವಾನರಕನದಿ[೪]ಯುನೀಸಾಡಿ ಮದ್ಭಾಗ್ಯದಿಂ ನಿ-
ನ್ನವನಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೦

ತನುವಂ ಸ್ತ್ರೀಪುತ್ರರಂ ರಕ್ಷಿಪ ವಿಪು[೫]ಳತೆ ಕೈಕೊಂಡು ಕಾರ್ಪಣ್ಯವಕ್ತ್ರಂ
ತನುಗಾತ್ರಂ ದೀನನೇತ್ರಂ ತುಷಲಘುತರವಾತ್ರಂ ಕರಂ ಪೊರ್ದಿ ತೋರ್ಪಿಂ
ಜನಮಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೧

ಮನೆಯೆಂದುಂ ಮಕ್ಕಳೆಂದುಂ ಜನನಿಜನಕರೆಂದುಂ ವೃಥಾ ಪತ್ನಿಯೆಂದುಂ
ಧನಮೆಂದುಂ ಧಾನ್ಯಮೆಂದುಂ ಸಕಲವಿಷಯವಿಂತೆನ್ನದೆಂದುಂ ನಿರರ್ಥಾ-
ರ್ಥನಿಮಿತ್ತಂ ಬೆಂದು ತಾಪತ್ರಯದೊಳೆ ಕುದಿದೆಂ ಬತ್ತಿದೆಂ ಬಾಡಿದೆಂ ಯಾ-
ತನೆಗೊಂಡೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೨

ವಿಪುಳಾನಂಗಾಗ್ನಿಯಿಂ ಬಂ[೬]ದೆಳೆದುರವಣಿಪಾಶಾಗ್ನಿಯಿಂದಂ ನಿರರ್ಥಂ[೭]
ಕುಪಿತೋದ್ಭೂತಾಗ್ನಿಯಿಂದಂ ಹರಹರ ಮಿಗೆ ಬೇವುತ್ತುಮಿರ್ದಪ್ಪೆನಾನಂ-
ದಪಯೋವಾರಾಶಿ ನಿಮ್ಮೀ ವಿಮಳಕರತಳಾಬ್ಜಂಗಳಿಂ[೮]ದೆತ್ತುತಯ್ಯೋ
ಕೃಪೆಯಿಂದಂ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೩

---

೧ ಕೈಂಕರ್ಯಮಂ (ಪಾ) ೨ ದ್ಯ (ತಾ) ೩ ಬಿ (ಪಾ) ೪ ನಿಧಿ (ಪಾ) ೫ ಕ (ಪಾ)
೬ ಬೆಂ (ಪಾ) ೭ ನಿತಾಂತ (ಪಾ) ೮ ಹಿಮಕರದ ಸರೋಜಂ (ಪಾ)

ನವೆದೆಂ ರೋಗಂಗಳಿಂದಂ ಸೆಡೆದೆನನುದಿನಂ ಸೇವೆಯಿಂದಂ ನಿರರ್ಥಂ
ಸವೆದೆಂ ಕಾಮಂಗಳಿಂದಂ ಮಿಗೆ ಪರಿಭವದೊಳ್ ಬಂದೆ ನಾನಾಸೆಯಿಂದಂ
ತವಿಲಾದೆಂ ಕೋಪದಿಂದಳ್ಕಿದೆನತಿಮದದಿಂ ಮುಂದುಗೆಟ್ಟಿರ್ದಪೆಂ ಶಂ-
ಭುವೆ ನೀಲಗ್ರೀವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೪

ಅಯ್ಯೋ ಸಂಸಾರಸಂಗಕ್ಕೞಿಯದೆಱಗಿದೆಂ ಮಳ್ಗಿದೆಂ ಮಾಱುವೋದೆಂ
ಮುಗಿ[1]ಯ್ಯಾಂತೆಂ ಮುಂದುಗೆಟ್ಟೆಂ ಸೆಡೆದೆನುಡುಗಿದೆಂ ಮಾಸಿದೆಂ ಸೂಸಿದೆಂ ಕಿ-
ರ್ಗಯ್ಯಾದೆಂ ಕಂದಿದೆಂ ಕುಂದಿದೆನಲಸಿದೆನಾಸತ್ತೆನಲ್ಲಾಡಿದೆಂ ನೀ-
ನಯ್ಯಾ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೫

ಉರಗಾಸ್ಯಾಲಗ್ನಭಗ್ನಪ್ರಚಲಿತಹರಿವೋಲ್ ವ್ಯಾಘ್ರವಕ್ತ್ರಪ್ರಯುಕ್ತ-
ಸ್ಫುರಿತಾತಂಕಾಂತರಂಗಸ್ಥಿತಿಮೃಗಶಿಶುವೋಲ್ ಸಿಂಹಹಸ್ತಾವಲಂಬ-
ದ್ವಿರದಂಬೋಲಿರ್ದನೀ ಮಾಯೆಯ ಮುಖದೆಡೆಯೊಳ್ ಬೇಗದಿಂ ಪಿಂಗಿ[2]ಸಾ ಮದ್[2]
ಗುರುವೇ ಮತ್ಸ್ವಾಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೬

ಲಲನಾಸಂಭೋಗರೋಗಂ ಪಸಿವನುಡುಗಿಸುತ್ತಾರ್ತಿಯಂ ಪೊಂಗಿಸುತ್ತುಂ
ಬಲಮುಂ ಕೈಗುಂದಿಸುತ್ತುಂ ಸುಜನವಚನಪಥ್ಯಕ್ಕೆ ತಾಂ ವಕ್ರಿಸುತ್ತುಂ
ಸಲೆ ಲಜ್ಜಾಭಾವಮಂ ಮೀಱಿಸುತುಮಿದೆಯಿದಕ್ಕೌಷಧಂಗೊಟ್ಟು ತಂದೇ
ತಲೆಯೊಳ್ ಕೈಯಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೭

ದ್ವಿರದಂಮತ್ಸ್ಯಂ ಪತಂಗಂ ಭ್ರಮರನಹಿಯೆನಿಪ್ಪಿಂತಿವೇಕೇಂದ್ರಿಯಾರ್ಥಂ
ತಿರುಗುತ್ತಿರ್ದಪ್ಪುವಿಂತೀ ಜನನದ ಬಳಿಯೊಳ್ ದೇವ ಪಂಚೇಂದ್ರಿಯಾರ್ಥಂ[3]
ವಿರಸಂ ವಿದ್ರೂಪಿ ಮೂರ್ಖಂ ವಿಷಯವಿಕಳನೇನಪ್ಪೆನೆಂತಿರ್ಪೆನಯ್ಯೋ
ಕರುಣೇ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೮

ತರದಿಂ ರೋಗಂ ವಿಷಂ ವೃಶ್ಚಿಕವನಲನಹಿವ್ಯಾಘ್ರಮುಗ್ರಾಯುಧಂಗಳ್
ದುರಿತಂ ಮತ್ತದ್ವಿಪಂ ಮೂರ್ಖತೆಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತ-
ಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೯

---

೧ ಮೆ (ಪಾ) ೨-೨ ಸುತ್ತುಂ (ಪಾ) ೩ ರ್ತಂ (ಪಾ)

ಧನಮಂ ಸೈತಾರ್ಜಿಪೆಂ ಬೈತಿಡುವೆನದಱೊಳಂ ಪುಣ್ಯವೈವಾಹಮಂ ಮಾ-
ಳ್ಪೆನದಂ ಪುತ್ರರ್ಗಲಂಕಾರಮನೊದವಿಸುವೆಂ ಕೂಡಿ[1] ಭೋಗಿಪ್ಪೆನೆಂದಾಂ
ನೆನೆಯುತ್ತಿರ್ಪನ್ನೆಗಂ ತೊಟ್ಟನೆ ಮರಣಮದಾಗಲ್ಕೆ ಬೇಳಪ್ಪ ದುಶ್ಚಿಂ-
ತನೆಯಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೦

ಕನಕಂ ನೀರಕ್ಕರಂ ಪೆಂಡಿತಿ ಕನಸು ಸುತರ್ ಮಂಜು ತಾಯ್ತಂದೆ ವಾಯಂ
ತನುವಭ್ರಚ್ಛಾಯೆ ಮಿತ್ರರ್ ಗಗನಕುಸುಮಮಿಷ್ಟರ್ ಮರೀಚೀಜಲಂ ಯೌ-
ವನಧರ್ಮಂ ಮೇಘಚಾಪಂ ಗೃಹವಚಿರವೆನಿಪ್ಪಿಂತಿವಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೧

ಎರವೀ ದೇಹಂ ಹಿರಣ್ಯಂ ಪುದು ಸತಿ ಪಗೆಯಾತ್ಮೇಷ್ಟರೌಪಾಧಿಕರ್ ಸೋ-
ದರರೆಲ್ಲಂ ವೈರಿಗಳ್ ತಾವೆನಿಪಿದನಱಿದುಂ ಮತ್ತಮಾವರ್ಥದಿಂದಂ
ಪೊರೆವೆಂ ರಕ್ಷಿಪ್ಪೆನೋವಿಂ ಬಿಡದೆ ನಡೆಯಿಪೆಂ ನಂಬಿ ನಚ್ಚಿರ್ಪನೆನ್ನಿಂ
ಮರುಳಾರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೨

ಜಲಮಂ ಪೊರ್ದಿರ್ಪ ಶೈವಾಲದ ತೆಱದೆ ಕರಂ ದೀಪಿಕಾಚ್ಛಾಯೆಯಂತು-
ಜ್ಜ್ವಲವಾಂತಾ ಚಂದ್ರಲಕ್ಷ್ಮಂ ಮುಕುರದೊಳಗೆ ತೋರ್ಪಾ ಪ್ರತಿಚ್ಛಾಯೆಯೆಂತಂ-
ತಲೆಯುತ್ತುಂ ಪತ್ತಿ ಬೆನ್ನಂ ಬಿಡದಿದೆ ಘನಸಂಸಾರವೀ ಮಾಯೆಯಂ ನಿ-
ರ್ಮಲ ನೀನೇ ತೀರ್ಚಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೩

ನೆಳಲೊಳ್ ಪೋರ್ವಂತಿರಾಕಾಶಮನವಯವದಿಂದೀಸು[2]ವಂತುರ್ವಿಯಂ ತಾಂ
ತೊಳೆವಂತಭ್ರಾಳಿಯಂ ಕಂಡರಿಸುವ ತೆಱದಿಂ ಧೂಮಮಂ ಸೀಳ್ವ ಪಾಂಗಿಂ
ಬಳಲುತ್ತಿರ್ದಪ್ಪೆನೀ ಮಾಯೆಯ ಮನೆಯ ದುಮಾಳಿಂದೆ ನಿರ್ಮಾಯ ನಿತ್ಯೋ-
ಜ್ಜ್ವಳ ನಿಸ್ತ್ರೈಗುಣ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೪

ಮದದಿಂದಂ ಪೊಳ್ತು ಪೋಗುತ್ತಿದೆ ಶಿವಶಿವ ಮಾತ್ಸರ್ಯದಿಂ ಪೊಳ್ತು ಪೋಗು-
ತ್ತಿದೆ ಆಹಾ ಪೊಳ್ತು ಪೋಗುತ್ತಿದೆ ಮುಸುಕಿದ ತತ್ಕಾಮದಿಂ ಪೊಳ್ತು ಪೋಗು-
ತ್ತಿದೆ ಲೋಭವ್ಯಾಪ್ತಿಯಿಂ ಕೋಪದಿನಱಿಯದೆ ದುರ್ಮೋಹದಿಂ ಪೊಳ್ತುಪೋಗು-
ತ್ತಿದೆ ತಂದೇ ತಂದೆ[3] ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೫

---

೧ ಡೆ (ಪಾ) ೨ ತೀರ್ಚು (ಪಾ) ೩ ನೋಡಿ (ಪಾ)

ಎರೆದೇವೆಂ ಪೊರ್ದಿಯೇವೆಂ ನಿರುತದೆ ನೆನೆದೇವೆಂ ಮನಂ ಮುಟ್ಟಿಯೇವೆಂ
ಕರೆದೇವೆಂ ಕೂರ್ತುರ್ಮೇವೆಂ ಬಿಡವತಿಭರದಿಂ ನಂಬಿಯೇವೆಂ ಶಿವಾ ಮದ್-
ಗುರುವೆ ಇನ್ನೇವೆನೇವೆಂ ನಿಜಕರುಣವಣಂ[೧]ಪೊರ್ದದಪ್ಪೈಶ್ಯನಂ[೨] ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೬

ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರದ್ವಿಪಂ ಬಂ-
ದವಿಚಾರಂ ಕಾಯ್ದು ಬಲ್ಪಿಂದೊವೆಯೆ ಮುದುಡಿ ಬೀಳ್ವಲ್ಲಿ ಕಾಳ್ಕಿಚ್ಚು ಸುತ್ತಂ
ಕವಿತಂದಾ ಪೊಳ್ತು ನಾಲ್ಕುಂ ದೆಸೆಗೆ ಪರಿದು[೩] ಬೇವದೆ ನೀವಲ್ಲದಾರ್ ಕಾ-
ವವರಿಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೭

ಎಡೆಗೊಂಡೀ ಮುಪ್ಪುದೋಱಲ್ ನರೆ ನೆಗೆದು ಸಿರಂದೂಗಿ ಬೆನ್ ಬಾಗಿಯೆಂತ
ಕ್ಕಡಿಯೆತ್ತಲ್ಕಾಱದೆತ್ತಂ ದಡದಡಿಸಿ ಕರಂ ಜೋಲ್ದು ಕೋಲೂಱಿ ನಿಂದುಂ
ನಡುಗುತ್ತುಂ ಕೆಮ್ಮಿ ಕೊಮ್ಮುತ್ತೊಡಲನೊಲೆಯುತುಂ ಮುಗ್ಗಿ ಬಳ್ವಂ ನಿತಾಂತಂ
ಕೆಡೆವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೮

ತೆಱಪಿಲ್ಲಂ ಸಾವು ಭೋಂಕೆಂದಡಸಿದ ಪದದೊಳ್ ಭಕ್ತಿಸಂಧಾನವೆಲ್ಲಿ-
ತ್ತಱಿವೆಲ್ಲಿತ್ತರ್ಥವೆಲ್ಲಿತ್ತಮಳಗುಣವದೆಲ್ಲಿತ್ತೋ ಸದ್ಧರ್ಮವೆಲ್ಲಿ-
ತ್ತೊಱಪೆಲ್ಲಿತ್ತೋಜೆಯೆಲ್ಲಿತ್ತತುಳಬಲಮದೆಲ್ಲಿತ್ತದಕ್ಕಂಜಿ ನಿಮ್ಮಂ
ಮಱ[೩]ವೊಕ್ಕೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೯

ಕಿವಿಕಣ್ಗಳ್ ಕೆತ್ತು[೪] ಬಾಯೊಗರ್ಡಿಸಿ ಕರೆಯೆ ಪೆರ್ಗೂರಿಡುತ್ತೆಯೆ ಬಂದಿ-
ರ್ದವರಂಜಲ್ ಶ್ವಾಸಮೇಱುತ್ತಿಳಿಯುತುಮಿರೆಯುಂತಲ್ಲಿ ಕೈ ಕಾಲ್ಗಳೊಳ್ ಜೀ-
ವವನಂಟಂಟಿ[೫]ಲ್ಲಿಯುಂ ಕಾಣದೆಯಕಟಕಟಯ್ಯೋ ಗಡಾ ಸತ್ತನೆಂಬೀ
ಪವಣಿಂದಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೦

ದೇವಾ ನಾನೇವೆನೆಂದೆಂದಬಲೆಯಳುತೆ ತಾಂ ಪೋಗೆ ಪಿಂದಂ ಜನಂಗಳ್
ಸಾವೀತಂಗಾಯ್ತೆನುತ್ತುಂ ಮಱುಗಿ ಬರೆ ತನೂಜಾಳಿಯುಂ ಬಂಧುವರ್ಗಂ
ತಾವೆತ್ತಂ ಮತ್ತೆ ಶೋಕಂ ಮುಸುಕಿ ನಡೆಯೆ ತತ್ಕಷ್ಟ[೬]ದೊಳ್ ಕಾಷ್ಠರೂಪಿಂ
ಬೇವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೧

---

೧ ಲವಂ (ಪಾ) ೨ ನಾಂ (ಪಾ) ೩ ಮುಸಗಿ (ಪಾ) ೪ ಟ್ಟು (ಪಾ) ೫ ದುಂಟುಂಟಿ (ಪಾ)
೬ ಕಾಷ್ಠ (ಪಾ)

ಜನನೀಗರ್ಭಾಂಡದಿಂ ಬರ್ಪತಿವಿಷಮುತ್ತರಕ್ಲೇಶಮಂ ಬಾಲ್ಯದೊಳ್ ಮಾ-
ಳ್ಪ ನಿಷೇಧವ್ರಾತಮಂ ಯೌವನವಿಕಳತೆಯುಂ ಮುಪ್ಪಿನಾ ಹೇಯಮಂ ಸಾ-
ವನಿರೋಧಸ್ತೋಮಮಂ ಕಂಡಲಸಿದೆನದಿರ್ದೆಂ ಪೇಸಿದೆಂ ನೊಂದೆನೋರಂ-
ತನುಗೆಟ್ಟಿಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೨

ಆನೆಂತೆಂತಕ್ಕೆ ಬಂದೆಂ ಮನುಜಭವದೊಳೆಂತಕ್ಕ ನೂನಾಂಗಸಂಗಂ
ತಾನಾಯ್ತೆಂತಕ್ಕೆ ಕೂಡಿತ್ತಘಟಿತಘಟಿತಂ ಸತ್ಕುಲಂ ಮತ್ತ ಮೆಂತ-
ಕ್ಕಾ ನಿಮ್ಮಂಘ್ರಿದ್ವಯಕ್ಕಾನೆಱಗಿದೆನಿನಿತಾಯಾಸದಿಂ ಬಂದೆನಯ್ ಸ-
ತ್ಯಾನಂದಜ್ಯೋತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೩

ಶರಣಾರ್ ನೀಂ ಕಾವರಾರ್ ನೀಂ ಗತಿ-ಮತಿ-ಪತಿಯಾರ್ ನೀಂ ಕೃಪಾಂಭೋಧಿ-
ಯಾರ್ ನೀಂ
ಗುರುವಾರ್ ನೀಂ ಗೋತ್ರವಾರ್ ನೀಂ ಜನನಿ-ಜನಕರಾರ್ ನೀಂ ಮಹಾಬಂಧು-
ವಾರ್ ನೀಂ
ವರರಾರ್ ನೀಂ ವಂದ್ಯರಾರ್ ನೀನೆನಗತಿಹಿತರಾರ್ ನೀಂ ಮಹಾದೇವ ನಿನ್ನಿಂ
ಪರರಾರಾರ್ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೪

ಮರುಳಾರಾಂ ಮತ್ತ[೧]ನಾರಾಂ ಮತಿವಿರಹಿತನಾರಾಂ ಬುಧದ್ವೇಷಿಯಾರಾಂ
ಪರ[೨]ನಾರಾಂ ಕರ್ಮಿಯಾರಾಂ ಖಲಜನಸಖನಾರಾಂ ಸದಾ[೩]ಕ್ರೂರವಾಕ್ಪಾ[೩]-
ಮರನಾರಾಂ ನೀಚನಾರಾಂ ವಿಷಯವಿಕಳನಾರಾಂ ಮಹಾಕ್ಷುದ್ರರೆನ್ನಿಂ
ಪರರಾರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೫

ಗುರು ನೀಂ ತ್ವಚ್ಛಿಷ್ಯನಾಂ ನಿರ್ಮಳಘನನಿಧಿ ನೀಂ ಕ್ಷುದ್ರನಾಂ ದಾನಿ ನೀನಾ-
ತುರನಾಂ ನಿಷ್ಕಾಮಿ ನೀಂ ಕಾಮದ ನೆಲೆವನೆಯಾಂ ತಂದೆ ನೀಂ ಪುತ್ರನಾಂ ಶಾಂ-
ತರಸಂ ನೀಂ ಕ್ರೋಧಿಯಾಂ ಪುಣ್ಯದ ಫಲತತಿ ನೀಂ ಪಾಪಿಯಾಂ ಸ್ವಾಮಿ ನೀಂ ಕಿಂ-
ಕರನಾಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೬

ಖಳನಂ ದುರ್ಬೋಧನಂ ದುರ್ವಿಷಯನಿ[೪]ರತನಂ ದುಷ್ಟನಂ ಧೂರ್ತನಂ ದುः-
ರ್ಬಳನಂ ದುರ್ಮೋಹಿಯಂ ದುರ್ಜನಜನಹಿತನಂ ಸಜ್ಜನದ್ವೇಷಿಯಂ ಸಂ-
ಚಳನಂ ದೋಷಾರ್ತಿಯಂ ದುರ್ಧ[೫]ರತರವಿರಸ[೬]ಕ್ರೀಡನಂ ಕೋಪಿಯಂ ವ್ಯಾ-
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೭

---

೧ ಮಂದ (ಪಾ) (೨) ಖರೆ (ಪಾ) ೩ ಕಾಮಿಯಾರಾಂ (ಪಾ) ೪ ವಿ (ತಾ) ೫ ದುಸ್ತ (ಪಾ) ೬ ವಿಷಯ (ಪಾ)

ಅಳಿಪಂ ಸನ್ಮಾನಹೀನಂ ಸುಜನಜನವಿದೂರಂ ವೃಥೋತ್ಸಾಹಿ ಮೂರ್ಖಂ
ಖಳನತ್ಯಾಸ್ವಾದಿ ವಿದ್ಯಾವಿನಯನಯವಿಹೀನಂ ಕುಜಾತಿಪ್ರಸಂಗಂ
ಗಳಪಂ ಚಾರ್ವಾಕನಜ್ಞಂ ಗುಣರಹಿತನೆನಿ[೧]ಪ್ಪೆನ್ನನೊಲ್ದೀಶ[೧] ನೀಂ ವ್ಯಾ-
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೮

ಸತತಂ ನಿಂದಾಕರಂ ನಿಷ್ಠುರನತಿಕೃಪಣಂ ಸಜ್ಜನ[೨]ದ್ವೇಷಿ ದುಶ್ಚಿಂ-
ತಿತಚಿತ್ತಂ ಜ್ಞಾನದೂರಂ ಪರಹಿತರಹಿತಂ ಭಕ್ತಿವಿಶ್ವಾಸಹೀನಂ
ಸ್ತುತಿಲೋಲಂ ರಾಗಶೀಲಂ ಸುಕೃತವಿಮುಖನಾನಂದಹೀನಂ ವಿಮಾನಂ
ನತಕಲ್ಪೋರ್ವಿಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೯

ಅತಿದೀನಂ ಧೂರ್ತಮಾನಂ ಪರಧನವನಿತಾಧೀನ[೩]ನಾನಂದಹೀನಂ
ಮತಿಶೂನ್ಯಂ ಡಂಭಮಾನ್ಯಂ ವಿಷಯವಿಸರದನ್ಯಂ[೪] ವಿಮೂರ್ಧಗರ್ಗನನ್ಯಂ
ನುತ[೫]ದೂರಂ ದುಃಖಸಾರಂ ಸುಜನಜನಘನಕ್ರೂರನೀ ಭೂಮಿಭಾರಂ
ಸತತಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೦

ಖರರೂಪಂ ಪಾಪದೀಪಂ ಕುಜನಜನ[೬]ಕಲಾಪಂ ಸದಾರಬ್ಧಕೋಪಂ
ಸ್ಥಿರಭಂಗಂ ದುಷ್ಪ್ರಸಂಗಂ ವಿಷಯಕುಸುಮಭೃಂಗಂ ದುರಾಶಾಂತರಂಗಂ
ವರಧೂರ್ತಂ ದಂಭಕಾ[೭]ರ್ತಂ ಖಳಜನಸಲಿಲಾವರ್ತನಜ್ಞಾನಗರ್ತಂ
ಕರುಣೀ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೧

ಘನವೆನ್ನೊಳ್ ಮಾಣದೀ ಕಾಮದ ವಿಕಳತೆಯೀ ಕ್ರೋಧವೀ ಲೋಭವೀ ದು-
ರ್ಮನವೀ ದುಶ್ಚಿಂತೆಯೀ ದುರ್ಮದದ ಮಮತೆಯೀ ಮೋಹವೀಯಾಸೆಯೀ ದು-
ರ್ಜನಸಂಗಪ್ರೇಮವೀ ಮತ್ಸರದ ಮಸಕವೀ ದುಃಖಸಂಸ್ತೋಮಮಂ ಛೇ-
ದನೆ[೮]ಯಂ ಮಾಡುತ್ತೆ[೮]ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೨

ಸಲೆ ಮಾಯಾಮೋಹವಾಚ್ಛಾದಿಸೆ[೯] ನೆಱೆ ಧೃತಿಗೆಟ್ಟೆಂ ವೃಥಾ ಧಾತುಗೆಟ್ಟೆಂ
ಪೊಲಗೆಟ್ಟೆಂ ಮುಂದುಗೆಟ್ಟೆಂ ನೆನೆಯದೆ ಮತಿಗೆಟ್ಟೆಂ ಕರಂ ಬುದ್ಧಿಗೆಟ್ಟೆಂ
ನೆಲೆಗೆಟ್ಟೆಂ ನೀತಿಗೆಟ್ಟೆಂ ಮಱೆದು ಮಿಗೆ ಮನಂಗೆಟ್ಟೆನಾನುರ್ಬುಗೆಟ್ಟೆಂ
ತಲೆಗೆಟ್ಟೆಂ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೩

---

೧ ಪೆಂ ಮಹಾದೇವ (ಪಾ) ೨ ಸದ್ಗುಣ (ಪಾ) ೩ ಸ್ತ್ರೀನ (ಪಾ) ೪ ಹ್ಯಂ (?) (ತಾ) ೫ ನುತಿ (ಪಾ) ೬ ಕುಲ (ಪಾ) ೭ ದುಃಖಕಾ (ತಾ); ದುಃಖಕ (ಪಾ) ೮ ಗೆಯ್ಪೆನ್ನಾಳ್ದ (ಪಾ) ೯ ಪೊತ್ತಾಡಿಸೆ (ಪಾ)

ನೆನೆವೆಂ ಸ್ವಪ್ನೋಪಮಸ್ಮಾರಕುವಿಷಯದ ಸಂಯೋಗಮಂ ಭೋಗಮಂ ಕೆ-
ಮ್ಮನೆ ನಿಮ್ಮೀ ಭಕ್ತಿಯೊಂಪಂ ನೆನೆಯೆನೊಸೆದು ಸತ್ಯತ್ವ-ನಿತ್ಯತ್ವಮಂ ಯಾ-
ತನೆಗೊಂಡರ್ಥಾರ್ಥದಿಂದನ್ಯರನನುದಿನಮೋರಂತೆ ಬೋಧಿಪ್ಪ ದುರ್ಬೋ-
ಧನನಯ್ಯೋ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೪

ಏಕೆನ್ನಂ ನೋಡದಯ್ಯೋ ಭವ ಭವ ಭವದೊಳ್ ತಂದೆ ಚಂದ್ರಾವತಂಸಾ
ಏಕೆನ್ನಂ ಮಾಯೆಯಿಂದಂ ಶಿವ ಶಿವ ಶಿವ ಬೆಳ್ಮಾಡುತಿರ್ದಪ್ಪೆ ಈಶಾ
ಏಕೆನ್ನಂ ಕಾಲನಿಂದಂ ಹರ ಹರ ಹರ ನೀಂ ಕಾಡುತಿರ್ದಪ್ಪೆ ದೇವಾ
ಲೋಕೈಕಾರಾಧ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೫

ಭವವೇಕಾನೇಕ ಸತ್ತ್ವಾದಿಗುಣದ ಪುದುವಾಳೇಕದಾನೇಕೆ ಕಾಮೋ-
ತ್ಸವವೇಕಾನೇಕೆ ತಾಪ[೧]ತ್ರಿತಯದ ಪ್ರೊಡೆಗಿ[೧]ಚೇಕದಾನೇಕೆ ಕೋಪೋ-
ದ್ಭವವೇಕಾನೇಕೆ ಕರ್ಮದ್ವಯದ ಕಡುದೊಡಂಕೇಕದಾನೇಕೆ ದೇವಾ
ಭವಕರ್ಮಧ್ವಂಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೬

ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ-ದುರ್ಬುದ್ಧಿಯಂ ಕೀ-
ಳ್ವುದು ನಿತ್ಯಂ ಶ್ರೀಗುರುಶ್ರೀಪದಸರಸಿಜಮಂ ತೋರ್ಪುದಾಹಾ ಬಳಿಕ್ಕಂ-
ತದು ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವಾ ಸಂಗಮಂ ಪಿಂ-
ಗದವೊಲ್ ನೀಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೭

ಹರಭಕ್ತರ್ ಬಂದೊಡುರ್ಬುತ್ತವರ ಚರಣಮಂ ಕಣ್ಗಳೊಳ್ ಕಂಠದೊಳ್ ಪೇ-
ರುರದೊಳ್ ಭಾಳಾಗ್ರದೊಳ್ ದೋರ್ಯುಗದೊಳುಭಯಗಂಡಂಗಳೊಳ್ ತಾಳ್ದು
ಮಿಗಿತ್ತು-
ತ್ತೊರೆಯುತ್ತಪ್ಪುತ್ತೆ ಹಿಗ್ಗುತ್ತತುಳಸುಖದೊಳಾಳುತ್ತುಮೋಳುತ್ತೆ ಬಾಳ್ದ-
ರ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೮

ಮೃಡಭಕ್ತವ್ರಾತವಾನಂದದೊಳಿದಿರ್ವರೆ ಕಂಡಾರ್ತದಿಂ ಸ್ನೇಹದಿಂ ಸೈ-
ಗೆಡೆದೆನ್ನೈಶ್ವರ್ಯವೆನ್ನಾಗಿನ ತ[೨]ಶಿವನಿಧಿಯೆನ್ನಾಯುವೆನ್ನೆಲ್ಲಮುಂ ನಿ-
ಮ್ಮಡಿಗಳ್ ಸರ್ವಸ್ವಮುಂ ನಿಮ[೩]್ಮಡಿಗಳೊಡವೆ ಆಂ ಕಾಪಿನಾಳೆಂದು ಚಿತ್ತಂ-
ಗುಡುತಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೯

---

೧—೧ ತ್ರಯುದ ಸುಡುವ ಕಿ (ಪಾ) ೨ ವೊ (ಪಾ) ೩ ನ (ಪಾ)

ಮುದದಿಂದಂ ನಿಮ್ಮ ಪೂಜಾರಚನೆಯನೊಲವಿಂ ಕಂಡು ಸರ್ವಜ್ಞನಿಂತೊ-
ಪ್ಪಿದನಾನಂದಾಬ್ಧಿಯಿಂತೊಪ್ಪಿದನಹಿಧರನಿಂತೊಪ್ಪಿದಂ ಶಂಭುವಿಂತೊ-
ಪ್ಪಿದನೆಂದಶ್ರುಪ್ರವಾಹಂ ಪರಿಯಿಡೆ ಪುಳಕಂ ಪೊಣ್ಮೆ ಸಂಸ್ತೋತ್ರಮಂ ಮಾ-
ಳ್ಪುದನೆನ್ನೊಳ್ ಕೂಡಿ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೦

ಅದನಿನ್ನೇನೆಂಬೆನಾಹಾ ಗುರುತರಸುಖಮಂ ತುಂಗಭದ್ರಾನದೀತೀ-
ರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿಸರ್ವಾಂಗನಾಗಿ-
ರ್ದು ದಯಾಂಭೋರಾಶಿ ಗಂಗಾಧರ ಪುರಹರ ಸರ್ವೇಶ[1]ನೆಂದುರ್ಬುವಾ ಸೌ-
ಖ್ಯದ ಪೆರ್ಚಂ ಕೊಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೧

ಎನಗಿನ್ನೆಂತೆಂಬ ಚಿಂತಾಪ್ರತತಿ ಹಱಿದು ಹಾಱಿತ್ತು ಕಾಮುಕ್ಕೆ ಮೋಹ-
ಕ್ಕನುಗೆಯ್ವೊಂದಾಗ್ರಹಂ ಕಟ್ಟನೆ ಕರಗಿತ್ತು ಮಾತ್ಸರ್ಯದೊಂದುಜ್ಜುಗಂ ಕ-
ಱನೆ ಕಂದಿತ್ತತ್ತಮಿತ್ತಂ ಮಿಗೆ ಮಸಗುವ ಕೋಪಂ ಕರಂ ತಗ್ಗಿ ಕುಗ್ಗಿ-
ಱ
ತ್ತೆನಿಪಂದಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೨

ತಳಿರಿಂ ಪೂವಿಂ ಫಲವ್ರಾತದಿನೊಱಗುವ ಚೂತವ್ರಜಚ್ಛಾಯೆಯೊಳ್ ಕೋ-
ಮಳಹಂ[2]ಸಸ್ತೋಮವಾಮ[2]ಭ್ರಮರಕುಳವಿಕಾಸಾಬ್ಜ ಕಾಸಾರದೊಳ್ ನಿ-
ರ್ಮಳನಿಷ್ಪಂದಪ್ರಕಾಶ[3]ಸ್ಥಳದೊಳಮಳಲಿಂಗಾರ್ಚನಾಸಕ್ತ ಚಿತ್ತೋ-
ಜ್ಜ್ವಳನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೩

ಅತುಳಸ್ವಚ್ಛಾಂಬುವಿಂ ಮಜ್ಜನಕೆಱಿದು ನವೀನಪ್ರಸೂನಪ್ರತಾನ-
ದ್ಯುತಿ ಸುತ್ತಲ್ ಸುತ್ತಿ ನಿಮ್ಮಂ ಸವಿನುಡಿ ಕವಿಯಲ್ ಬಣ್ಣಿಸುತ್ತಶ್ರು ಮೀಱಲ್
ನುತರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ ಪೂಜಾ-
ತತಿಯಂ ಮಾಳ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೪

ನೆನೆಯುತ್ತುಂ ಪೂಜಿಸುತ್ತುಂ ಚರಣದೊಳಲರುತ್ತುಂ ಮರಲ್ದೀಕ್ಷಿಸುತ್ತುಂ
ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ ಗರ್ವಿ[4]ಸುತ್ತುಂ
ಜಿನುಗುತ್ತುಂ ಜೀವಿಸುತ್ತುಂ ಧಿಣಿಧಿಣಿರವ[5]ದಿಂದಾಡುತುಂ ಪಾಡುತಿರ್ಪೊಂ-
ದನುರಾಗಂಮಾ[6]ಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೫

---

೧ ಸರ್ವಜ್ಞ (ಪಾ) ೨ ಸಾರಾಮರಾಮ (ಪಾ) ೩ ಶಾಂತ (ಪಾ) ೪ ಗರ್ಜಿ (ತಾ, ಪಾ)
೫ ತಣಿದಣಿಯರ (ಪಾ) ೬ ಗೂ (ಪಾ)

ಎನಸುಂ ಮತ್ತನ್ಯದೈವಕ್ಕೆಱಗದ ಸಿರಮುಂ ನೇತ್ರಮುಂ ಶ್ರೋತ್ರಮುಂ ಮ-
ನ್ಮನಮುಂ ಮದ್ಬುದ್ಧಿಯುಂ ಮತ್ಕರತಳಯುಗಮುಂ ಜಿಹ್ವೆಯುಂ ಘ್ರಾಣಮುಂ ನಿ-
ಕ್ಕೆನ ಸರ್ವಾಂಗಂಗಳುಂ ನಿಮ್ಮಯ ದೆಸೆಗೆ ಕರಂ ಚೇಷ್ಟಿಸುತ್ತಿರ್ಪ್ಪ[೧]ಯುಂ ನಿ-
ಲ್ವಿನ[೨]ಮೆನ್ನೊಳ್ ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೬

ಮುದದಿಂ ತ್ವತ್ಕೀರ್ತಿಯಂ ಕೇಳ್ವೆಡೆಯೊಳತುಳರೋಮಾಂಚ[೩]ದಿಂ ಸ್ಪಂದದಿಂ[೩] ಗ-
ದ್ಗದದಿಂ ಸ್ವೇದಂಗಳಿಂ ಕಂಪನದಿನೊಲವಿನಿಂ ಲೀಲೆಯಿಂ ಲೋಭದಿಂ ಸ-
ನ್ಮದದಿಂ ಸಂತೋಷದಿಂ ಶಾಶ್ವತಸುಖಮುಖದಿಂ ಶೈವಸಾಮ್ರಾಜ್ಯ ಸಮ್ಯಕ್-
ಪದವಾಂತಿ[೪]ರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೭

ಹರನಾಮಂ ಕರ್ಣಮಂ ತಾಗಿದ ಸಮಯದೊಳಾನಂದದಿಂದುರ್ಕಿ ರೋಮಾಂ-
ಕುರವೆಳ್ದಶ್ರುಪ್ರವಾಹಂ ಗಳಗ[೫]ಳನಿಳಿತಂದಂಗವಲ್ಲಾಡಿ ಭಿನ್ನ[೬]-
ಸ್ವರದಿಂದಂ ಗದ್ಗದಂ ಪುಟ್ಟುತೆ ಬೆಮರ್ವನಿಗಳ್ ಪೊಣ್ಮೆ ಸಲ್ಲೀಲೆಯಿಂದಿ-
ರ್ಪ[೭]ರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೮

ಮನದೊಳ್ ವಾಕ್ಯಂಗಳೊಳ್ ನೋಳ್ಪೆಡೆಗಳೊಳೊಲವಿಂ ಮಾಳ್ಪ ಕಜ್ಜಂಗಳೊಳ್ ಕಾ-
ನನದೊಳ್ ಕಾಪು೦[೮]ಗಳೊಳ್ ತಣ್ಣೆಳಲೊಳೆ ಬಿಸಿಲೊಳ್ ಜಾಗ್ರದೊಳ್ ಸ್ವಪ್ನದೊಳ್ ಮೂ-
ರ್ಛನೆಯೊಳ್ ದಾರಿದ್ರ್ಯದೊಳ್ ಸಂಪದದೊಳೆ ಸುಖದೊಳ್ ದುಃಖದೊಳ್ ದೇವ ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೯

ಭರದಿಂದಂ ಭೀತಿಯಿಂದಂ ಶರಣ[೯]ವಚನದಿಂದಾಸೆಯಿಂ ಭಾಷೆಯಿಂದ-
ಚ್ಚರಿಯಿಂ ಡಂಭಿಂ ವೃಥಾಳಾಪದಿನಸವಸದಿಂ ಕಾಮದಿಂ ಕೋಪದಿಂ ಕೂ-
ರ್ಪರ ದಾಕ್ಷಿಣ್ಯಂಗಳಿಂ ಖ್ಯಾತಿಯಿನಸುದಿನವೆಲ್ಲಂದದಿಂ ದೇವ ನಿಮ್ಮಂ
ಸ್ಮರಿಯಿಪ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೦

---

೧ ಸಂಗ (ಪಾ) ೨-೨ ಮುನ್ನಿ|ರ್ಪಿನ (ಪಾ) ೩-೩ ದಿಂ ಸ್ವೇದದಿಂ (ತಾ); ದಿಂ ವಶ್ರುವಿಂ (ಪಾ) ೪ ವಿಂದಿ (ಪಾ) ೫ ದಳವ (ಪಾ) ೬ ಖಿನ್ನ [ತಾ]; ಭಿನ್ನ (ಪಾ) ೭ ಗ್ರಾಮಂ (ಪಾ) ೮ ಸರಳ (ಪಾ)

ಚದುರಿಂದಂ ವೇಷಮಂ ತೋಱದೆ ನಿಜಗುಣಮಂ ಬೀಱದತ್ಯುಷ್ಣಮಂ ಹೇ[೧]-
ಱದೆ ಡಂಭಿಂ ಸಾರದೆಂತುಂ ಶರಣವಚನಮಂ ಮೀಱದತ್ತಿತ್ತಲುಂ ಜಾ-
ಱದೆ ಬೇಱೊಂದಿಚ್ಛೆಯಿಂ ಕೀಱದೆ ಪರವಶದಿಂ ತಾಱದೀ ಭಕ್ತಿಯಂ ಮಾ[೨]-
ಱದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೧

ಇದನೊಲ್ವಿಂ ದೈನ್ಯಮಂ ಸೂಡದೆ ಪರವಧುವಂ ನೋ[೩]ಡದೇನೊಂದುಮಂ ಬೇ-
ಡದೆಯಾರಂ ಮಿಥ್ಯೆಯಿಂ ಕಾ[೪]ಡದೆ ಪರಸುಖದೊಳ್ ಬಾಡದುದ್ರೇಕದೊಳ್ ಕೋ-
ಡದೆ ಪಾಪಾಂಭೋಧಿಯೊಳ್[೫] ಕೂಡದೆ ಚಪಳತೆಯಂ ನೀಡದತ್ಯಾಶೆಯಂ ಮಾ-
ಡದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೨

ಸತಿ ಕಾರುಣ್ಯಂ ಕುಮಾರಂ[೬] ಮತಿ ಸಖನುರು[೬] ಸತ್ಯಂ ಪ್ರಧಾನಂ ವಿವೇಕಂ
ಸ್ತುತಿ ಭಂಡಾರಂ ಸುಧರ್ಮಂ ಕರಿತುರಗರಥಾಖ್ಯಂ ನಿರಾಶಾ-ಸ್ವದೇಶಂ
ಸತತಂ ತಾನಾಗಿ ಶಾಂತಿಸ್ಥಲದೊಳೆಸೆವ ಸದ್ಭಕ್ತಿಸಪ್ತಾಂಗ[೭]ರಾಜ್ಯ-
ಸ್ಥಿತ[೭]ನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೩

ಗುರುವಂ ನಂಬಿರ್ದು ಮತ್ತಾ ಗುರುಕರುಣದೆ ಪಂಚಾಕ್ಷರೀಮಂತ್ರಮಂ ತಾ-
ಳ್ದು ರಹಸ್ಯಂ ಭಕ್ತಿಯಿಂದಂ ಜಪಮನೆಣಿಸಿ ಗುರ್ವಾಜ್ಞೆಯಂ ಮೀಱದತ್ಯಾ-
ದರದಿಂದಂ ನೆತ್ತಿಯೊಳ್ ಪೊತ್ತನುಪಮಸುಖದಿಂ ಬಾಳ್ವ ಭೃತ್ಯತ್ವಮಂ ಮ[೮]-
ದ್ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೪

ಅಲರಿಂ ಕೂರ್ತಿಟ್ಟೊಡಂ ಚಕ್ರದಿನುಱ[೯] ಮುಳಿದಂತಿ[೯]ಟ್ಟೊಡಂ ಹಂಸತೂಲ-
ಸ್ಥಲದೊಳ್ತಾಂ ಬೈತೊಡಂ ಮುಳ್ಗಳ ಹೊಸಹಸೆಯೊಳ್ ಬೈ[೧೦]ತೊಡಂ ಸ್ನೇಹದಿಂದಂ
ನಲವಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ವಮೊಂದಂದಮೆಂದಾಂ
ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೫

ಎಸೆವೀ ಪಂಚಾಕ್ಷರೀಮಂತ್ರಮೆ ಗುರುತರಮಂತ್ರಂ ವಿಶುದ್ಧಾಂಗಲೇಪಂ
ಭಸಿತಂ ರುದ್ರಾಕ್ಷಿಯೇ ಭೂಷಣತತಿ ಪರಮಸ್ವಾಮಿ ನೀಂ ಪೂಜ್ಯನಾ[೧೧]ನಂ-
ದನಮೇತಂ ಭಕ್ತನೇ ಸತ್ಕುಲಜನೆನಿಸಿದಂ ನಂಬಿ ಮತ್ತೇನುಮಂ ಭಾ-
ವಿಸದಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೬

---

೧ ಹೀ (ಪಾ) ೨ ಮೀ (ಪಾ) ೩ ಕೂ (ಪಾ) ೪ ನೋ (ಪಾ) ೫ ವಿದ್ಯಾ ಗರ್ವದೊಳ್ (ಪಾ) ೬-೬ ಸಖನುತಮತಿ (ಪಾ) ೭-೭ ರಾಜ್ಯಾನ್ವಿತ (ಶಾ) ೮ ಸ (ಪಾ) ೯ ಸಿಂದಿ (ಪಾ) ೧೦ ಸೈ (ಪಾ) ೧೧ ಪೂಜಿಯಾ (ಪಾ)

ಕರೆವಲ್ಲಿಂ ಮುನ್ನವೋ ಓ ಮಗನೆ ಮಗನೆ ಬಂದೆಂ ದಿಟಂ ಬಂದೆನೆಂದಾ-
ದದರದಿಂದಂ ನೀನೆ ಬಂದೆನ್ನವಯವನಿತಂ ಮುಟ್ಟಿ ನೊಂದಾ ಬಳಲ್ದಾ
ಕರೆದಾ ಕಂದಾ ಎನುತ್ತುಂ ಕೃಪೆ ಮಿಗೆ ನಲವಿಂ ನೋಡಿ ಮುಂಡಾಡುತೆಂದುಂ[1]
ಸಿರದೊಳ್ ಕೈಯಿಕ್ಕಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೭

ನಿಮಗೆನ್ನಂ ಮಾಱುಗೊಟ್ಟೆಂ ಪುರ[2]ಹರ ನಿಮ[3]ಗೆನ್ನಂ ಸದಾ ತೊಳ್ತು[3]ಗೊಟ್ಟೆಂ
ನಿಮಗೆನ್ನಂ ಸೂಱೆಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಕೊಟ್ಟೆನಾಹಾ
ನಿಮಗೆನ್ನಂ ಮಚ್ಚುಗೊಟ್ಟೆಂ ಗುರುವೆ ಘನವೆ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದಸರ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೮

ಮುದದಿಂದಂ[4]ಕಾಮಮಂ ಕೋಪಮನುಱಿ ಜಱಿದಾಮೋಹಮಂ ದಾಂಟಿ ಲೋಭ-
ತ್ವದ ಬೇರಂ ಕಿಳ್ತು ಮಾತ್ಸರ್ಯಮನುಡುಗಿ ಮದಾಲೇಪಮಂ ತೀರ್ಚಿಯಾಶಾ-
ಸದನಕ್ಕಾಸತ್ತು ಬೇಸತ್ತ[5]ತುಳಶಿವ[5]ಸುಖಾವಾಸದೊಳ್ ಭಕ್ತಿಯಿಂ ತ್ವತ್-
ಪದಮಂ ಸಾರ್ವಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೯

ಎನಗಾರ್ ದೈ[6]ವಂ ವಿರೂಪಾಕ್ಷನೆ ಗುರುವೆನಗಾವಂ ವಿರೂಪಾಕ್ಷನೇ ಕೇಳ್
ಜನಕಂ ತಾನಾರ್ ವಿರೂಪಾಕ್ಷನೆ ಜನನಿಯದಾವಳ್ ವಿರೂಪಾಕ್ಷನೇ ಆ-
ಳ್ದನದಾವಂ ಶ್ರೀವಿರೂಪಾಕ್ಷನೆ ನಿಜಸಖನಾವಂ[7] ವಿರೂಪಾಕ್ಷನೇ ಎಂ-
ಬಿನಿತಂ ಸ್ತೈತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೦

ಮನೆದೈವಂ ಮುಖ್ಯದೈವಂ ಸುಖತ[8]ರಕುಲದೈವಂ ಪರಾನಂದದೈವಂ
ಮನದೊಳ್ ನಟ್ಟಿರ್ಪ ದೈವಂ ಶರಣಜನಮಹೋತ್ಸಾಹದೈವಂ ಕರಂ ಪೆಂ-
ಪಿನ ದೈವಂ ದೈವದೈವಂ ಸಕಲಸುಕೃತದೈವಂ ಸುಧಾ[9]ಕಾರದೈವಂ
ಘನದೈವಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೧

ಪರಮಾರ್ಥಂ ನಿಮ್ಮ ಸಮ್ಯಕ್‌ಪರತರನಿಜಮಂ ಭಾವಿಸಲ್ ಬಣ್ಣಿಸಲ್ ತಾ-
ಮರಸೋದ್ಭೂತಂಗೆ ಶಕ್ರಂಗಸುರರಿಪುಗೆ ವೇದಕತರ್ಕ್ಯಂ ದಲೆಂದಂ
ದೊರೆವಂತಾಂ ಮರ್ತ್ಯನೆಂಬೀ ವಚನಮೆ ಪರಿಹಾಸಾಸ್ಪದಂ ದೇವ ನೀನೇ[10]
ಕರುಣಂಗೆಯ್ಯುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೨

---

೧ ಕೊಂಡಾಡುತೆನ್ನೀ (ಪಾ) ೨ ಹರ (ಪಾ) ೩-೩ ಗೆನ್ನನೆ ತಾನೊತ್ತು (ಪಾ) ೪ ಒದೆದಿಂತೀ (ಪಾ) ೫-೫ ಳುತೆ ನಿಜ (ಪಾ) ೬ ದೇ (ಪಾ) ೭ ಸುಖವಾಸಂ (ಪಾ) ೮ ಕ (ಪಾ) ೯ ಸದಾ (ಪಾ) ೧೦ ನೀವೇ (ಪಾ)

ಬಿಸವಂ ತಾಳ್ದಿರ್ದ್ದ ನಿತ್ಯಂ ಸ್ಮರನನುರಿಪಿಯುಂ ಕಾಮಿ ಸರ್ವೇಶ್ವ[೧]ರಂ ಮು-
ತ್ತ್ರಸಮಂ ಭಿಕ್ಷೇಶ್ವರಂ[೧]ಸರ್ವಮನಳಿದನಘಂ ಚಂದ್ರನಂ ಸೂಡಿಯುಂ ಕೋ-
ಪಸಮಾಯುಕ್ತಂ ವಿರುದ್ಧಪ್ರಕೃತಿ ತಿಳಿಯದಾರ್ಗ್ಗಂ ಕೃಪಾವಾರ್ಧಿ ನಿನ್ನಂ-
ಘ್ರಿಸರೋಜಂದೋಃಜಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೩

ಸ್ಥಿರವಲ್ಲಂ ನೋಡೆ ಸರ್ಗಸ್ಥಿತಿಲಯವಾಗಿರ್ಪ್ಪುದಿಂತೀ ಪ್ರಪಂಚಂ
ಸ್ಥಿರರೂಪಂ ನೀನೆ ಕರ್ಮದ್ವಿತಯವಿರಹಿತಂ ನೀನೆ ಶುದ್ಧಾತ್ಮಕಂ ನೀ-
ನೆ ರಸಾದಿವ್ಯೋಮದಿಕ್‌ಪೂರಿತ ನಿಜನಿಧಿ ನೀನೆಂಬಭಿಜ್ಞಾನಮಂ ಮದ್-
ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೪

ಅಪರಿಚ್ಛಿನ್ನಂ ಸ್ವತಂತ್ರಂ ನಿರವಧಿಯ[೨]ಮಳಂ ಶಂಕರಂ ನಿತ್ಯನಾನಂ-
ದಪದಂ ಶಾಂತಾರ್ಕಕೋಟಿಪ್ರಭನಜರನಚಿಂತ್ಯಂ ಪರಂಧಾಮ[೩]ರೂಪಂ
ವಿಪುಳಜ್ಞಾನಾಬ್ಧಿ ಸತ್ಯಂ ನಿರುಪಮನಿಧಿ ನೀನೆಂಬಭಿಜ್ಞಾನಮಂ ನೀಂ
ಕೃಪೆಯಿಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೫

ಸ್ಥೂಲಂ ಸೂಕ್ಷ್ಮಂ ಸುಸೂಕ್ಷ್ಮಂ ಸುಲಭಸುಲಭಂ ಪುಣ್ಯಪಾಪಪ್ರದೂರಂ
ನೀಲಗ್ರೀವಂ ಚಿದಾತ್ಮಂ ಭವನಭವನನೂನಾದ್ಯನಾದ್ಯಂತಶೂನ್ಯಂ
ಕಾಲಘ್ನಂ ಕಾಲರೂಪಂ ನತನಿಕರವಿಪಜ್ಜಾಲವಿಚ್ಛೇದಲೀಲಾ-
ಲೋಲಂ ನೀಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೬

ಶಿವ ಸರ್ವಾಧಾರ ಗಂಗಾಧರ ಪುರಹರ ಸರ್ವಜ್ಞ ಸರ್ವೇಶ ಗೌರೀ-
ಧವ ನೀಲಗ್ರೀವ ಕಾಲಾಂತಕ ಪಶುಪತಿ ಫಾ[೪]ಲಾಕ್ಷ ಭೋಗೀಂದ್ರ[೫]ಭೂಷಾ-
ಭವ ರುದ್ರೇಶಾನ ಭರ್ಗ ಪ್ರಮಥನಿಧಿ[೬]ಮಹಾದೇವ ಮಾರಾರಿ ನಿತ್ಯೋ-
ತ್ಸವ ಸತ್ಯಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೭

ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ ಕಾಪಾಲಿಯಂಧಾ-
ಸುರವೈರಿ ವ್ಯೋಮಕೇಶ ಕ್ರತುಕುಲನೃ[೭]ಪತಿ ಸ್ಥಾಣು ಭೂತೇಶ ಪಂಚಾ-
ವರಣಪ್ರತ್ಯಕ್ಷ ಪಂಚಾನನ ಮೃಡ ಗಜಚರ್ಮಾಂಬರಶ್ರೇಷ್ಠ ವಿಶ್ವೇ-
ವರ ಸದ್ಯೋಜಾತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೮

---

೧-೧ ರತ್ನಾ|ಕ್ಕೆಸೆವ ಭಿಕ್ಷಾಚರಂ (ಪಾ) ೨ ಯನ (ಪಾ) ೩ ಪರಾನಂದ (ತಾ); ಪರಂಜ್ಯೋತಿ (ಪಾ) ೪ ಭಾ (ಪಾ) ೫ ನಾಗೇಂದ್ರ (ಪಾ) ೬ ಪತಿ (ಪಾ) ೭ ಕೆ (ಪಾ)

ಹರ ಭೀಮ ತ್ರ್ಯಕ್ಷ ಭಕ್ತವ್ರಜಹೃದಯ ಪಿನಾಕಿ ತ್ರಿಶೂಲಿ ತ್ರಿಕಾಲಾ-
ಕ್ಷರ ನಿರ್ದೇಹಾಂಭವಾ ಧೂರ್ಜಟಿ ಜಟಿಲಶಿರೋಮಾಲಿ ಶಂಭು ಪ್ರಪಂಚೋ-
ತ್ತರ ಪಂಚಬ್ರಹ್ಮ ಪಂಚಾಧಿಕ ಹಿಮಕರಚೂಡಾಮಣೀ ವೀರಭದ್ರೇ-
ಶ್ವರ ಕಾಲಾತೀತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೯

ವರಕಾರುಣ್ಯಾಬ್ಧಿ ಷಡ್ದರ್ಶನ[೨]ಹಿತ ಪರಮಸ್ವಾಮಿ ಸರ್ವಜ್ಞ ಪಂಚಾ-
ಕ್ಷರಗರ್ಭಾವಾಸ ಮಾದ್ಯತ್[೩]ಪ್ರಮಥಜನಪರೀತೋಪ[೪] ವಿಶ್ವೇಶ ತತ್ತ್ವಾ-
ಕರ ತಾರಾದ್ರೀಶ ನಾರಾಯಣನಯನಲಸತ್ಪಾದ ನಾದಾತ್ಮ[೫]ಭಕ್ತಾ-
ತುರ[೫]ಚಿತ್ತಗ್ರಾಹಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೦

ಶಿವ ನಿಮ್ಮಿಂ ಪುಟ್ಟಿತೀ ಮಾಯೆ ಗಡೆನಿಸಿದನಾಂ ಸ್ವೈರಿಸೆಂ ಪುಟ್ಟಿತೆಂಬೊಂ-
ದವಿಚಾರಂ ನಿಷ್ಕ್ರಿಯಾತ್ಮಪ್ರಭುತನಕೆ ಕರಂ ಹಾನಿ ಶುದ್ಧಾತ್ಮನೊಳ್ ಶಂ-
ಭುವಿನೊಳ್ ಸಮ್ಯಕ್ಪರಾನಂದದ ತವನಿಧಿಯೊಳ್[೬]ನಿನ್ನೊಳೀ ಭ್ರಾಂತಿ-
ಯೆಂಬಾ[೭]
ಶ್ರವೆಯಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೧

ಮೊದಲಿಂದಂ ಕೂರ್ಮರೋಮಂ[೮]ಟಗೆಯ ಶಶಿವಿಷಾಣಂ ವಿಯತ್ಪುಷ್ಪದಂತಿ-
ಲ್ಲದುದೇ ಸತ್ಯಂ ಪ್ರಪಂಚೆಂದಱಿದು ತಿಳಿದು ನಿಷ್ಕಾಮ ನಿರ್ಮಾಯ ನಿತ್ಯಾ-
ಭ್ಯುದಯಾನಂದೈಕತೇಜೋನಿಧಿ ನಿರುಪಮ ನಿರ್ಲೇಪ ನಿರ್ವಾಣ ನೀನೆಂ-
ಬಿದನೇ ಸ್ತೈತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೨

ತೋಱುತ್ತಿರ್ಪೀ ಜಗಂ ತಾನಱಿವಿನ ಮುಖದೊಳ್ ತೋಱದಿರ್ಪಂತೆ ತೋರ್ಕುಂ
ತೋಱಲ್ ಪೇಳಲ್ಕೆ ಕೇಳಲ್ಕಸದಳಮೆನಿಪಾ ಬ್ರಹ್ಮತಾ ಬ್ರಹ್ಮವಾಗು-
ತ್ತಾಱುಂ ಬಣ್ಣಕ್ಕಮೇಳುಂ ತನುವಿನ ಪೊರೆಗೆಂಟುಂ ಶರೀರಕ್ಕೆ ಮಿಕ್ಕುಂ
ಮೀಱಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೩

ತೊಳಗುತ್ತಿರ್ಪರ್ಕನಿಂದಾಗಸವೆನಿತನಿತಂ ಮಾಡಿದಂತಿರ್ಪ ಧಾತ್ರೀ-
ತಳಮೆಲ್ಲಂ ಚಂದ್ರನಿಂದಂ ಸಮೆದುದೆನಿಸಿದಂತಿರ್ಪ ದಿಕ್ಸಂಕುಳಂ ನಿ-
ರ್ಮಳವಿದ್ಯುಲ್ಲೇಖೆಯಿಂ ನಿರ್ಮಿಸಿದವೊಲೆಸೆದಿರ್ಪಾ ಪರಂಜ್ಯೋತಿಯೆನ್ನೊಳ್
ಬೆಳಗುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೪

---

೧ ನಿರ್ಲೇಪಾ(ಪಾ) ೨ ವರ್ಗರ (ಪಾ) ೩ ನಿತ್ಯಂ (ಪಾ) ೪ ರಾನಂದ(ಪಾ) ೫-೫ ಭಕ್ತೋತ್ತರ (ಪಾ) ೬ ಕೆನೆತಿರುಳೊಳ್ (ಪಾ) ೭ ಬೀ (ಪಾ) ೮ ಕೂರ್ಮರೋಗಂ (ಪಾ)

ಗುರುವಿಂ ಶುದ್ಧಾತ್ಮನಾದೆಂ ಗುರುವಿನ ಕೃಪೆಯಿಂದಂ ಜಗತ್ಪೂಜ್ಯನಾದೆಂ
ಗುರುವಿಂ ನಿಷ್ಕಾಮನಾದೆಂ ಘನತರಗುರುವಿಂ ಶಾಂತಿಸಂಪನ್ನನಾದೆಂ
ಗುರುವಿಂ ಸರ್ವಜ್ಞನಾದೆಂ ದಿಟವೆನಿಗಿದನೆನ್ನೊಳ್ ದಿಟಂ ಮಾಡುತುಂ ಮದ್-
ಗುರುವೇ ಗೌರೀಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೫

ಎನ್ನಾನಂದಾಬ್ಧಿಯೇ ಎನ್ನನುಪಮಸುಧೆಯೇ ಎನ್ನ ಪುಣ್ಯಸ್ವರೂಪವೇ
ಎನ್ನಾಯುಃಪುಂಜವೇ ಎನ್ನಯ ಗತಿಮತಿಯೇ ಎನ್ನ ವಿಜ್ಞಾನಮೂರ್ತೀ
ಎನ್ನೈಶ್ವರ್ಯವೇ ಎನ್ನತಿಶಯಗುರುವೇ ಎನ್ನ ಚೈತನ್ಯದಾಗೇ
ಎನ್ನ ಪ್ರಾಣೇಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೬

ನಿತ್ಯಜ್ಞಾನೈಕಮೂರ್ತೀ ಸುಖತರಪರಮಾನಂದ ಸರ್ವಜ್ಞ ಮೂರ್ತೀ
ನಿತ್ಯತತ್ವಾಧಾರಮೂರ್ತೀ ನಿರವಯವಮಹಾಮೂರ್ತಿ ನಿರ್ಲೇಪಮೂರ್ತೀ
ನಿತ್ಯಪ್ರತ್ಯಕ್ಷಮೂರ್ತೀ ನಿಖಿಲಗುಣಗಣಾಧಾರ ನಿರ್ಮಾಯಮೂರ್ತೀ
ನಿತ್ಯಶ್ರೀಮೂರ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೭

ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊ-
ಯ್ದೊಡ[1]ಮಂದಿಂದೆಂದುಮೆಂತು[1] ಬಿಡೆನಭವ ಬಿಡೆಂ ಶಂಕರಾ[2] ಮಾಣೆನಾಂ ಬಲ್-
ವಿಡಿದೆಂ ಮತ್ತತ್ತಮಿತ್ತಂ ಚಲಿಯಿಸದೆಲೆ ಮತ್ಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತಾ[3]ರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೮

ಕರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಭರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಹರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಕೂರ್ತಿಂತೋರಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೯

ಭರದಿಂ ಕೇಳ್ವೋದುವಾನಂದದೊಳತಿಶಯದಿಂ ಮೆಚ್ಚಿ ಲಾಲಿಪ್ಪವರ್ಗಾ-
ದರದಿಂ ನಿತ್ಯಾಯುವಂ ಸಂಪದವನಭವನೀಯುತ್ತುಮಿರ್ಕೆಂದನೂನಂ
ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂ ನಚ್ಚಿ ಪೇಳ್ದಂ
ಹರಿದೇವಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦೦

---

೧ ಮಂತಿಂತೆಂತುಮೆಂದುಂ (ಪಾ) ೨ ಸರ್ವಥಾ (ಪಾ) ೩ ಕ್ತ್ಯ (ಪಾ)

ಪಿಂದೇನೇನಾಗಿ ಬಂದೆಂ ಮನುಜಜನನಮುಂ ತಾನಿದೆಂತಾಯ್ತು ಸಂಸಾ-
ರಂ ದೋಷಂ ಕಾಮಲೋಭಾದಿಗಳೆನಗಮಿವೆಲ್ಲಿಂದೆ ಬಂದತ್ತು ಮತ್ತಂ
ಮುಂದೇನಾದಪ್ಪೆನೆಂದಾನಱಿಯದೆ ಭಯದಿಂ ಶಂಕಿಸುತ್ತಿರ್ದಪೆಂ [ನಿಃ]?
ಸಂದೇಹಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಈ ಪದ್ಯವು ಮುದ್ರಿತ ಪ್ರತಿಯಲ್ಲಿ ೪೩ನೆಯ ಪದ್ಯದ ಮುಂದೆ ಬಂದಿದೆ; ಆದರೆ ತಾಳೆಯೋಲೆಯ ಪ್ರತಿಯ ಪ್ರತಿಗಳಲ್ಲಿ ಇಲ್ಲ.



# ಪಂಪಾಶತಕಂ

ಶ್ರೀಮದ್ ರಾಜಕಳಾವತಂಸ ಧರೆ-ಚಂದ್ರಾರ್ಕಾಗ್ನಿ-ಜೀವಾನಿಲ-
ವ್ಯೋಮಾಂಬುಪ್ರಕರಂ[೧]ಗಳಿಂ ಸಕಲಮಂ ರಕ್ಷಿಪ್ಪ ಸರ್ವೇಶ ಸು-
ತ್ರಾಮಾದಿತ್ರಿದಶವ್ರಜಾರ್ಚಿತಪದಾಂಭೋಜಾತ ಸದ್ಭಕ್ತಿಯಂ
ಪ್ರೇಮಂ ಕೈಮಿಗೆ[೨] ಮಾಡು ನೀನೆನಗೆ ಪಂಪಾ [ಶ್ರೀ][೨]ಪುರಾಧೀಶ್ವರಾ ೧

ಪುಳಕದ ಹಾದಿಗೆಂದು ಪಥವಪ್ಪುದು ಕಣ್ಗಳ ಕೋಡಿಗೆಂದು ನೀ-
ರ್ಗಳ ಕಡೆಗಾಣ್ಬುದೆನ್ನ ಚರಣಂಗಳ ಲೀಲೆಗದೆಂದು ಕೀಲ್ಗಳ-
ಚ್ಚಳಿವುದು ಕೈಯ ಕಂಪದ ಕದಂ ತೆಱ[೩]ದಪ್ಪುದು ತಪ್ಪದೀ ಮನೋ-
ಗಳಿತತರಾಬ್ಧಿಗೆಂದು ಮಿಗೆ ಮೇಱ[೩]ಯಗಲ್ವುದು ಹಂಪೆಯಾಳ್ದನೇ ೨

ಪುಳಕವ ತೊಟ್ಟಿಲೊಳ್ ಬೆಮರ ಮಜ್ಜನದಿಂದೆಸಲೆಣ್ಣೆ (?) ಯಿಟ್ಟು ಕ-
ಣ್ಗಳ ಪೊಲೆವಾಲನೂಡಿ ತೊದಳಿಂದವೆ ಬಣ್ಣಿಸಿ ಹಾಡಿ ಕಂಪದಿಂ-
ದಳವಡೆ ತೂಗಿಯುಚ್ಚಸುಖನಿದ್ರೆಯನಂದಮನುಂಟುಮಾಡಿ ನಿ-
ಶ್ಚಳನಿಜಭಕ್ತಿಯಿತ್ತು ಸಲೆ ರಕ್ಷಿಪುದೇಂದೆಲೆ ಹಂಪೆಯಾಳ್ದನೇ ೩

ಹರಹರ ಎನ್ನ ಕೈಯ ಹಸಿವೋಡಲಣಂ ತನುವಿಂದೆ ಪೂಜೆಯಂ
ವಿರಚಿಪೆನೆಂದೊ ಕಣ್ಗಳ ಬಱಂ ತಿಳಿಯಲ್ ಪೊಸನೋಟದಿಂದೆ ಕೆಂ-
ಕರಿಸುವೆನೆಂದೊ ಮೈಮುಱಿದು ಕಣ್ಗೆಡಲಪ್ಪಿ ಮನೋನುರಾಗದಿಂ
ನೆರೆವೆನದೆಂದೊ ನಿಮ್ಮನತಿನೇಹದೆ ಪೇಳೆಲೆ ಹಂಪೆಯಾಳ್ದನೇ ೪

ಕರೆವುದದೆಂದು ಕಾಲ್ವಿಡಿಸಿಕೊಳ್ವುದದೆಂದು ದಯಾಕಟಾಕ್ಷದಿಂ
ಪೊರೆವುದದೆಂದು ಮೆಲ್ನುಡಿಗಳಿಂ ಮದವೇಱಿಪುದೆಂದು ಸೋಂಕಿನಿಂ-
ದೊರೆವು[೪]ದದೆಂದು ಸಂತಸದೆ ಪೆರ್ಚಿಪುದೆಂ[೪]ದಮರ್ದಪ್ಪಿನೊಳ್[೪]ಕರಂ
ಕರಗಿಪುದೆನ್ನನೆಂದೊಸೆದು[೫]ನೀಂ ಕೃಪೆಯಿಂ[೫]ದೆಲೆ ಹಂಪೆಯಾಳ್ದನೇ ೫

---

೧ ವ್ಯೋಮಂ ವಹ್ನಿಜಲಂ (ತಾ); ವ್ಯೋಮಾದಿಪ್ರಕರಂ (ಪಾ) ೨-೨ ಕೂಡುಗೆಮ್ಮೊಳೆಲೆ ಪಂಪಾಪ್ಪೈ (ತಾ) ೩ ಹರಿಪು (ಪಾ) ೪-೪ ದು ಮನಸ್ಸಿನೀಂ (ಪಾ) ೫-೫ ಪೇಳೆನಗಿಂ (ಪಾ)

ತೆರೆಮಸಗಲ್ ಸುಖಾಶ್ರುವಿದಿರೇಱುತಿರಲ್ ಪುಳಕಂ ಬೆಮರ್ ಕರಂ
ಪರಿಯಿಡೆ ಗದ್ಗದಂ ಸುಳಿಗೊಳುತ್ತಿರೆ ಕಂಪನವುರ್ಕಿ ಲೀಲೆಯೊ-
ತ್ತರಿಸುತಿರಲ್ ನವೀನ[1]ನಿಜಭಕ್ತಿತರಂಗಿಣಿ ಮೀಱುತುಬ್ಬರಂ-
ಬರಿಯುತುಮೆನ್ನ ಮೇಲೆ ಮಡುಗಟ್ಟುವುದೆಂದೆಲೆ ಹಂಪೆಯಾಳ್ದನೇ ೬

ನಡೆತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಬಿಡದಂತೆನ್ನಯ ಜಿಹ್ವೆಯಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಎಡೆಗೊಂಡೆನ್ನಯ ಚಿತ್ತದಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಇಡಿ[2]ದಂತೆನ್ನೊಳೆ ಕೂಡಿ ನಿಲ್ಲೆಲೆ ವಿರೂಪಾಕ್ಷಾ ವಿರೂಪಾಕ್ಷನೇ ೭

ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣಮದೇಕೆ ಭಕ್ತಿಯಿಂ
ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ
ಮಾಡದ ಕೈಗಳೇಕೆ ನೆಱೆ ಸೋಂಕದ ದೇಹಮದೇಕೆ ಕೂಡಿಯು-
ಳ್ಳಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳೆಳ್ಳಱಂ ೮

ಎಂದುಂ ನಿಮ್ಮೊಳೆಲೇ ಮಹೇಶನೆ ಮನಂ ಬಂದಂತೆ ಚಿಂತಿಪ್ಪ ಕಣ್
ಬಂದಂತೀಕ್ಷಿಪ ಜಿಹ್ವೆ ಬಂದ ತೆಱದಿಂ ಬಣ್ಣಿಪ್ಪ ಪ್ಪೈಯ್ಯುರ್ಬಿನಿಂ
ಬಂದಂತಾಂ ಪುಳಕಿಪ್ಪ ಕೈಗಳೆನಿತುಂ ಬಂದಂತೆ ಪೂಜಿಪ್ಪ ಕಾಲ್
ಬಂದಂತಾಡುವ ಸೈಪು ಸಾರ್ವುದೆನಗಿನ್ನೆಂದೋ ವಿರೂಪಾಕ್ಷನೇ ೯

ಇದು ಚಿತ್ರಂ ಪರಮಂತ್ರಸಂತತಿ ವಿರೂಪಾಕ್ಷಂ ವಿರೂಪಾಕ್ಷನೆಂ-
ಬುದೆ ಮಾತಕ್ಕಟ ತನ್ನ ಜೀವವೆ ವಿರೂಪಾಕ್ಷಾ ವಿರೂಪಾಕ್ಷನಾ-
ಮದಿನಾಗಳ್ ಪುದಿಪಂತಿರಿರ್ಪುದುಮಿದೇನೀತಂಗೆನುತ್ತೆಲ್ಲರುಂ
ಪದೆದೆನ್ನಂ ನುಡಿವಂದದಿಂ ನೆನೆ[3]ವೆನಿನ್ನೆಂದೋ ವಿರೂಪಾಕ್ಷನೇ ೧೦

* ಕ್ರಮದಿಂ ಪೂಜಿಪ ಪೂಜೆ ಮೆಲ್ಲನೆ ಸಡಿಲ್ದಾನಂದಮಳ್ಕಾಡುತಿ-
ರ್ಕೆಮ ಸೋತ್ಸಾಹದೆ ಕಣ್ಗಳೊಳ್ ಸುಖರಸಂ ಹಸ್ತಂಗಳೊಳ್ ಕಂಪನಂ
ಕ್ರಮದೊಳ್ ನರ್ತನಮಂಗದೊಳ್ ಪುಳಕಮಾ ಜಿಹ್ವಾಗ್ರದೊಳ್ ಲಲ್ಲೆ ಸಂ-
ಭ್ರಮದಿಂ ಪುಟ್ಟಲಪೆಂದು ಪೂಜಿಸುವೆನಾಂ ನಿನ್ನಂ ವಿರೂಪಾಕ್ಷನೇ ೧೧

---

೧ ಮದೀಶ (ತಾ) ೨ ನುಡಿ (ತಾ) ೩ ನೆರೆ (ಪಾ)

* ಈ ಪದ್ಯವು ತಾಳವೋಲೆಯ ಪ್ರತಿಯಲ್ಲಿಲ್ಲ.

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನಸವೆಂಬಿಂತಿವಂ ನಿತ್ಯಮೆಂ[೧]ದು-
ನ್ನ[೧]ತರ ವ್ಯಾಸಂಗದಿಂ ಮೆಯ್ಯಱಿಯದೆ ಮರುಳಾಗಿರ್ದನೆನ್ನಂ ದುರಾಶಾ-
ವೃತನಂ ದುರ್ಮೋಹಿಯಂ ದುಸ್ತರತರವಿಷಯವ್ಯಾಪ್ತನಂ[೨] ದುರ್ವಿವೇಕೋ-
ದಿ[೨]ತನಂ ದುರ್ಬೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ೧೨

ಅನುಪಮದಾನಿಯಪ್ರತಿಮದಾನಿ ನಿರಂತರದಾನಿ ಸಂದ ಪೆಂ-
ಪಿನ ಘನದಾನಿ ಕೌತುಕದ ದಾನಿ ಮಹೋನ್ನತದಾನಿಯೆಂದು ನಿ-
ನ್ನನೆ ಪೊಗಳುತ್ತುಮಿಂತಿದೆ[೩] ಸಮಸ್ತ ಜಗಜ್ಜನವೀ ಸುಕೀರ್ತಿಗೆ-
ನ್ನನೆ ನಡೆ ನೋಡದಿರ್ಪರವದರ್ಕನುಕೂಲಮೆ ಹಂಪೆಯಾಳ್ದನೇ ೧೩

*ನಾನಾಜನ್ಮಂಗಳೊಳ್ ಬಾರದ ಪರಿಭವಮುಂ ಬಂದ ತನ್ನಂದಮುಂ ತಾ-
ನೇನೆಂದೊಂದೆಳ್ಳನಿತ್ತುಂ ನೆನೆಯದು ತನಗೆಂತಿಚ್ಛೆಯಂತಿರ್ದು ನಿನ್ನೀ
ಧ್ಯಾನಾರಂಭಕ್ಕಣಂ ಸಲ್ಲದು ಸುಡು ಸುಡು ಚಿಃ ಮನ್ಮನೋವೃತ್ತಿ ನಿನ್ನಂ
ತಾನಾಱಿಂ ನೀನೆ ಸಂತಂ ನಿಲಿಸಿದನೊಲವಿಂದಂ ವಿರೂಪಾಕ್ಷಲಿಂಗಾ ೧೪

ಪಸಿವಿಂದಂ ಬೇಂಟೆಗಂ ನಟ್ಟಡವಿಗೆ ನಡೆತಂದೇಱಿ ಬಿಲ್ವಾಗ್ರಮುಂ ವ್ಯಾ-
ಪಿಸದತ್ತಿತ್ತಂ ಮೃಗಧ್ಯಾನದೊಳಿರೆ ಶಿವರಾತ್ರಿವ್ರತಂಗೆಯ್ದನೆಂದಂ-
ದೊಸೆದಾ ಬೇಡಂಗೆ[೪] ಸಾರೂಪ್ಯದ ಘನಪದಮುಂ ಕೊಟ್ಟೊಡಂ ದಾನಿಯೆಂದ[೪]-
ರ್ಚಿಸಿ ನಿನ್ನಂ ನಂಬಿದೆಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷನೆನ್ನಂ[೫] ೧೫

ಮೋಹಕ್ಕೋರೊರ್ಮೆ ಮಾತ್ಸ[೬]ರ್ಯದ ನುಡಿನೆಲೆಗೋರೊರ್ಮೆ
ಸಂದಿರ್ದ ಕಾಮೋ-
ತ್ಸಾಹಕ್ಕೋರೊರ್ಮೆ[೭] ಕೊರ್ವಿರ್ದೊದವಿದ[೭] ಮದಕೋರೊರ್ಮೆ ಪೆರ್ಚಿರ್ದ
ಲೋಭ-
ವ್ಯೂಹಕ್ಕೋರೊರ್ಮೆ ಕೋಪೋನ್ನತಿ[೮]ಯ ಮಮತೆ[೮]ಗೋರೊರ್ಮೆ ಮೆಯ್ವೆ-
ರ್ಚಿ[೯]ನಿಂ ದೇ[೯]-
ಹೋಹಂ ಎಂದೆಂಬುದಂ ಮಾಣಿಸು ಮನಕೆಯಿ[೧೦]ದೊಂದಂ
ವಿರೂಪಾಕ್ಷಲಿಂಗಾ ೧೬

---

೧–೧ ದು|ಚ್ಛ (ಪಾ) ೨–೨ ದುರ್ಧರ್ರೈನೋ|ಹ (ಪಾ) ೩ ರೆ (ಪಾ) ೪–೪ ಕೈಲಾಸದ ವಸತಿಯನಿತ್ತೋವಿದ್ಯೆ ಮಾಣದಾನ (ಪಾ) ೫ ಲಿಂಗಾ (ಪಾ) ೬ ಮಾಧು (ಪಾ) ೭–೭ ನೆಯ್ವೆಚ್ಚೊರ್ದವಿದ (ಪಾ) ೮–೮ ಯನುಮತಿ (ಪಾ) ೯–೯ ಮದ್ವೇ (ಪಾ) ೧೦ ಕನಿ (ಪಾ)

* ಈ ಪದ್ಯ ತಾಳೆವೋಲೆಯ ಪ್ರತಿಯಲ್ಲಿಲ್ಲ.

ಮದನವಿರೋಧಿ ಬಾರ ದುರಿತಾಂತಕ ಬಾರ ಪುರಾರಿ ಬಾರ ಶಾ-
ರದಶಶಿಮೌಳಿ ಬಾರ ಫಣಿಕುಂಡಲ ಬಾರ ಮಹೇಶ ಬಾರ ಪು-
ಣ್ಯದ ನೆಲೆವೆರ್ಚೆ ಬಾರ ಸತತಂ ಪೊರೆವಾಳ್ದನೆ ಬಾರ ಮೇರೆದ-
ಪ್ಪಿದ ಕರುಣಾಬ್ಧಿ ಬಾರ ಹರ ಬಾರೆಲೆ ಬಾರೆಲೆ ಹಂಪೆಯಾಳ್ದನೇ ೧೭

ಕ[1]ರಣಂಗಳ್ ಕಳಿಯೇಱೆ ಲೋಚನಯುಗಂ ನೀರೇಱೆ ಮೆಯ್ಯೆಲ್ಲವಂ-
ಕುರವೇಱಲ್ ನುಡಿ ಕಂಪವೇಱೆ ಚ[2]ರಣಂಗಳ್ ಲೀಲೆಯೇಱಲ್ ಮೊಗಂ
ಸಿರಿಯೇಱಲ್ ತಲೆಗೇಱಿದುತ್ಸವದೆ ನಿಮ್ಮಂ ಪೂಜಿಸುತ್ತಾನುಮಾ-
ದರದಿಂದೀಕ್ಷಿಸು[3]ತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ ೧೮

ಕೆಯ್ಗೆ ನಮೋನಮೋ ಪದೆದು ಕಂಪಿಸುತೀಶ್ವರ ನಿಮ್ಮನರ್ಚಿಪಾ
ಬಾಯ್ಗೆ ನಮೋನಮೋ ತೊದಳದುನ್ನತಿಭಕ್ತಿಯೊಳೆಯ್ದೆ ಪಾಡುವಾ
ಮೆಯ್ಗೆ ನಮೋನಮೋ ಪುಳಕಂ ಕೆಲಸಾರ್ಚುತೆ ಸೊಂಕಿ ಪೆರ್ಚುವಾ
ಸುಯ್ಗೆ ನಮೋನಮೋ ಬಿಡದ ಲಲ್ಲೆಯ ನೇಹವೆ ಹಂಪೆಯಾಳ್ದನಂ[4] ೧೯

ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ
ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾ ನಿಗಮೋತ್ತಮಾಂಗಮು-
ಣ್ಬೊಡೆ ವಿಷಮಲ್ಲದಿರ್ದೊಡೆ ಸಮಸ್ತ ಜಗಂ ನಿಮಗೇನನೆಂದಪರ್[5]
ತುಡುವೊಡೆ ಸರ್ಪನಲ್ಲದೊಡೆ ಕುಂಜರಚರ್ಮವೆ ಹಂಪೆಯಾಳ್ದನೇ ೨೦

ವಿನುತಬ್ರಹ್ಮಾಂಡಮುಂ ಪುಟ್ಟಿಪ ಹರಹರ ಪಾಲಿಪ್ಪ ಸಾಮರ್ಥ್ಯರೆಂ[6]ದೊಂ-
ದಿನಿಸುಂ[7]ಕೊಂಡಾಡಿ ಭಾಪೆಂ[7]ದಜಹರಿಗಳನಾಂ ಬಣ್ಣಿಸುತ್ತಿರ್ಪೆನೇ ಘೋಂ-
ಕನೆ ನಿಮ್ಮೊಂದಾಜ್ಞೆಯಿನ್ನೀ ಮನಕೆ ಮಸಕದಿಂದಂದು ತೋಱಲ್ಕಹೋ[8] ನ-
ಚ್ಚಿನ ವಾಕ್ಯಂ ಮುದ್ರಿಸಲ್ ಸುಮ್ಮನಿರುತೆ ಮಱವಟ್ಟಿಂ ವಿರೂಪಾಕ್ಷಲಿಂಗಾ ೨೧

ನವನಿಧಿ ಬಾರ ಪುಣ್ಯನಿಧಿ ಬಾರ ಮಹಾನಿಧಿ ಬಾರ ಭಕ್ತರು-
ತ್ಸವನಿಧಿ ಬಾರ ಭಾಗ್ಯನಿಧಿ ಬಾರ ಸುಧಾರಸಕಾಯಕಾಂತಿಯು-
ದ್ಭವನಿಧಿ ಬಾರ ಸತ್ತ್ವ[9]ನಿಧಿ ಬಾರ ಕೃಪಾನಿಧಿ ಬಾರ ಸತ್ಯಸಂ-
ಭವನಿಧಿ ಬಾರ ತತ್ತ್ವನಿಧಿ ಬಾರೆಲೆ ಬಾರೆಲೆ ಹಂಪೆಯಾಳ್ದನೇ ೨೨

---

೧ ಹ (ಪಾ) ೨ ಕ (ಪಾ) ೩ ದುಣ್ಮುತೆ (ಪಾ) ೪ ನೇಂ (ಪಾ) ೫ ಪೆಂ (ಪಾ) ೬ ದೊರಿ (ಪಾ) ೭-೭ ಕಂಡಾಗಳಾರ್ಪಿಂ (ಪಾ) ೮ ತೋಱಲ್ಕೆ ಪೋ (ಪಾ) ೯ ನಿತ್ಯ (ಪಾ)

ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ನೈ ಸದಾಶಿವಾ
ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ನೈ ಮಖಾರಿಯು-
ಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ನೈ ಮಹೇಶ ಮ-
ದ್ಗುರುವೇ ಪುರಾರಿ ಪೂಜ್ಯನೆ ನಿಜಾಂಘ್ರಿಗೆ ಸಾರ್ಚಲೆ ಹಂಪೆಯಾಳ್ದನೇ ೨೩

ದೇವ ಮಹೇಶ ದೇವ ಗಿರಿಜಾಧಿಪ ದೇವ ಸಮಸ್ತಭಕ್ತ[೧]ಸಂ-
ಜೀವನ ದೇವ ಕಾಮಮದಮರ್ದನ ದೇವ ಹಿರಣ್ಯಗರ್ಭವಿ-
ದ್ರಾವಣ ದೇವ ವಿಷ್ಣುನಯನಾರ್ಚಿತಪಾದಪಯೋಜ ದೇವ ಸಂ-
ಸೇವಿತ ದೇವದೇವ ಮಮ ರಕ್ಷಕ ರಕ್ಷಿಸು ಹಂಪೆಯಾಳ್ದನೇ ೨೪

ಪುರವಂ ಸುಟ್ಟವನೀತನೀತನೆ ಹರಿಬ್ರಹ್ಮರ್ಗೆ ಸಾಮರ್ಥ್ಯದೊಂ-
ದಿರವಂ ಕೊಟ್ಟವನೀತನೀತನೆ ಮಹೋಗ್ರಾಭೀಳಸರ್ಪಂಗಳಾ-
ಭರಣಂದೊಟ್ಟವನೀತನೀತನೆ ಲಸತ್-ಶೀತಾಂಶುವಂ ಮೌಳಿಯೊಳ್
ಸ್ಥಿರವಾಗಿಟ್ಟವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೨೫

ಪರಮೇಶ ಪ್ರಭುವೀತನೀತನೆ ನಿಜಂ[೨] ನಂಬಿರ್ದ ಭಕ್ತರ್ಗೆ ತ-
ನ್ನಿರವಂ ತೋಱುವನೀತನೀತನೆ ಜಗತ್-ಸಂಹಾರವಂ ಮಾಡುವಾ
ಗರಳಂದಾಳ್ದವನೀತನೀತನೆ ಸಗರ್ವಂ ಪೆರ್ಚೆ ವಾಣೀಶನಾ
ಸಿರವಂ ಕಿಳ್ತವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೨೬

ಸ್ಮರನಂ ನೋಡಿದನೀತನೀತನೆ ಸಮುದ್ಯತ್ಕೋಪದಿಂ ದಕ್ಷನ-
ಧ್ವರಮಂ ಸುಟ್ಟವನೀತನೀತನೆ ಕುಱುತ್ತೈಯ್ತಂದು ನಿಂದಂಧಕಾ-
ಸುರನಂ ಮೆಟ್ಟಿದನೀತನೀತನೆ ಕರಂ ಬಂದಾರ್ಪಿನಿಂದಂ ಗಜಾ-
ಸುರನಂ ಸೀಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೨೭

ವಸುಧಾವಂದಿತನೀತನೀತನೆ ಮಹಾನಾಟ್ಯಾಭಿರಂಗಂ ವಿರಾ-
[೩]ಜಿಸೆ ನಿಂ[೩]ದಾಡಿದನೀತನೀತನೆ ನಿತಾಂತಂ ಭಕ್ತ[೪]ಯೂಥಕ್ಕೆ[೪]ಸಂ-
ತಸಮಂ ಸಾರ್ಚುವನೀತನೀತನೆ ಮುರಾರಿ ಬ್ರಹ್ಮರೊಲ್ದೊಲ್ದು ಪೂ-
ಜಿಸುವೀಶಪ್ರಭುವೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ* ೨೮

---

೧ ದೇವ (ಪಾ) ೨ ದಿಟಂ (ಪಾ) ೩-೩ ಜಿಸಲಂ (ಪಾ) ೪-೪ ಸಂತಾನ (ತಾ)
* ಮುದ್ರಿತ ಪ್ರತಿಯಲ್ಲಿ ಈ ಪದ್ಯವು ೨೭ನೆಯ ಪದ್ಯದ ಮೊದಲು ಬಂದಿದೆ.

ಜಿತಪುಷ್ಪಾಯುಧನೀತನೀತನೆ ಸರೋಜಾತಾಕ್ಷವಾಣೀಶವಂ-
ದಿತಸರ್ವೇಶ್ವರನೀತನೀತನೆ ಸಹಸ್ರಾಕ್ಷಪ್ರಮುಖ್ಯಾಮರಾ-
ರ್ಚಿತಪಾದಾಂಬುಜನೀತನೀತನೆ ಕಪಾಳಾಭೀಳಮಾಳಾವಿಮಂ-
ಡಿತವಕ್ಷಃಸ್ಥಳನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೨೯

ನತದೇವಾಧಿಪನೀತನೀತನೆ ವಿರಿಂಚೋಪೇಂದ್ರಮಧ್ಯಸ್ಥಿತೋ-
ದ್ಧತಲಿಂಗೋದ್ಭವ[೧]ನೀತನೀತನೆ ಸಹಸ್ರಾಂಶುಪ್ರವಿಮುಖ್ಯರ್ಕಳು[೨]-
ನ್ನತತೇಜೋನಿಧಿಯೀ[೩]ತನೀತನೆ ಪರಂಜ್ಯೋತಿಸ್ವರೂಪಪ್ರಕಾ-
ಶಿತಪುಣ್ಯೋದಯನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೩೦

ತ್ರಿಜಗತ್ಪೂಜಿತನೀತನೀತನೆ ಸುರರ್ ಕೊಂಡಾಡೆ ದಿವ್ಯಾಸ್ತ್ರಮಂ
ವಿಜಯಂಗಿತ್ತವನೀತನೀತನೆ ಮನಂ ಮುಟ್ಟಿರ್ಪ ನಿಷ್ಕಾಮಭ-
ಕ್ತಜನಕ್ಕಾಶ್ರಯನೀತನೀತನೆ ಲಸತ್ಸಾಮರ್ಥ್ಯದಿಂದಂ ಶಿರೋ-
ವ್ರಜಮಂ ತಾಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೩೧

ವೇದಕ್ಕುನ್ನತನೀತನೀತನೆ ಹರಿಬ್ರಹ್ಮಾದಿಗಳ್ ಮಾಳ್ಪ ಸಂ-
ವಾದಕ್ಕಗ್ಗಳನೀತನೀತನೆ ಶರಣ್ಬೊಕ್ಕಿರ್ದ ಭಕ್ತಾಳಿಯಂ
ಕಾದುಂ ರಕ್ಷಿಪನೀತನೀತನೆ ಗಣವ್ರಾತಕ್ಕೆ ತಾಯ್ತಂದೆ ತಾ-
ನಾದಾ ಶಂಕರನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೩೨

ಶ್ರೀ ಗಂಗಾಧರನಂ ಶಶಾಂಕಶಿಖಿಮಾರ್ತಂಡತ್ರಿಣೇತ್ರಾಂಕನಂ
ಭೋಗೀಂದ್ರಾರ್ಚಿತನಂ ರತೀಶವಿಪಿನಪ್ರೋದ್ಭೂತದಾವಾಗ್ನಿಯಂ
ಯೋಗಿವ್ರಾತಪರೀತನಂ ಶರಣಹೃದ್ರಾಜೀವಸಪ್ತಾಶ್ವನಂ
ನಾಗೇಂದ್ರಾಜಿನದಿವ್ಯವಸ್ತ್ರಧರನಂ ಕಂಡೆಂ ವಿರೂಪಾಕ್ಷನಂ ೩೩

ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲಸಂ-
ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂ-
ಧರನಂ ಭರ್ಗನನುಗ್ರನಂ ಪರಮನಂ ಸರ್ವಜ್ಞನಂ ಶಂಭುವಂ
ಗಿರಿಜಾವಲ್ಲಭನಂ ಮನೋಜಹರನಂ ಕಂಡೆಂ ವಿರೂಪಾಕ್ಷನಂ ೩೪

---

೧ ನ್ನತ (ಪಾ) ೨-೨ ತಾನಾತಲೋ (ಪಾ) ೩ ಮುಯುನೀ (ಪಾ)

ಎನ್ನಾನಂದಸುಧಾಬ್ಧಿವರ್ಧನಕಳಾಸಂಪನ್ನನಂ ಚೆನ್ನನಂ
ಮುನ್ನಾರುಂ ನೆಱೆ ಕಾಣಬಾರದ ಲಸತ್ಕಾಪಾಲಿಯುಂ ಶೂಲಿಯುಂ
ಭಿನ್ನಾಭಿನ್ನಮೆನಲ್ಕೆ ತೋಱಿದ[೧] ಮಹಾನಿಸ್ಸೀಮನಂ ಭೀಮನಂ
ಚೆನ್ನಂಗಂದುಱೆ ತನ್ನನಿತ್ತಭವನಂ[೨] ಕಂಡೆಂ ವಿರೂಪಾಕ್ಷನಂ ೩೫

ಆನಂದಾಮೃತವಾರ್ಧಿಯಂ ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ
ನಾನಾದೇವಕಿರೀಟಕೋಟಿವಿಲಸತ್ಪಾದಾಬ್ಜನಂ ಭೃತ್ಯಸಂ-
ತಾನಾಂಭೋಧಿಸುಧಾಂಶುವಂ ದುರಿತಘೋರಧ್ವಾಂತಮಾರ್ತಾಂಡನಂ
ಭಾನುಜ್ಯೋತಿಗತರ್ಕ್ಯಕಾಂತಿಯುತನಂ ಕಂಡೆಂ ವಿರೂಪಾಕ್ಷನಂ ೩೬

ಅದೆ ನಾಗಾಸುರನುದ್ಧೃ[೩]ಚರ್ಮವದೆ ಮೇಣ್ ವ್ಯಾಘ್ರಾಸುರಾಕೃತ್ತಿ ನೋ-
ಡದೆ ನಾರಾಯಣನೊಂದು ದೇಹವದೆ ತನ್ನೇತ್ರಂ ಸುರೇಂದ್ರಾದಿಗಳ್
ಬೆದರಲ್ಕಪ್ರತಿಮಪ್ರತಾಪನಿಧಿಯುಟ್ಟಂ ತೊಟ್ಟನಾರ್ದೆತ್ತಿದಂ
ಪದದೊಳ್ ಪತ್ತಿಸಿ ಬಾಳ್ದ ಭಾಪುರೆ ವಿರೂಪಾಕ್ಷಂ ಲಲಾಟೇಕ್ಷಣಂ ೩೭

ಗಣನೆಗೆ ಜಿಹ್ವೆಯುಂಟೆನಿಪ ಗರ್ವದೆ ಸಾದರನೋವಿ[೪] ದೇವರೆಂ-
ದೆಣಿಸದಿರಣ್ಣ ಹಂಪೆಯರಸಂ ನಿಟಿಲಂದೆಱೆಯಲ್ ಬಳಿಕ್ಕದೆ-
ತ್ತಣ ಹರಿಯೆತ್ತಣಬ್ಜಭವನೆತ್ತಣ ವಾಸವನೆತ್ತಣಗ್ನಿಯೆ-
ತ್ತಣ ಯಮನೆತ್ತಣ ತ್ರಿದಶಸಂಕುಳವೆತ್ತಣಭಾಸ್ಕರೇಂದುಗಳ್ ೩೮

ಬೆಳಗಿಂತೆಲ್ಲಿಯುದಲ್ಲಿ ಪೋಗದೆ ಅಹಾ ಅಃ ಅಕ್ಕಟಾ ಬೇವುವ-
ಗ್ಗಳದಿಂದಂ ತ್ರಿಪುರಂಗಳ[೫]ಳ್ಕಮೆಯು[೫]ದಾವಂ ಸುಟ್ಟನಮ್ಮಮ್ಮ ಭೂ-
ತಳದೊಳ್ ನೀನಱಿವಾಂತನಲ್ತುಸಿರದಿರ್ ಮತ್ತಾರ್ ದಿಟಂ ಪೇಳೆನಲ್[೬]
ತಿಳಿಯಲ್ ಹೋ ಮದನಾರಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೩೯

ಮದನಂ ಗರ್ಜಿಸಿ[೭]ಬಿಲ್ಲುಮಂ ಸರಲುಮಂ ಕೈಕೊಂಡು ಬಂದಾರ್ದು ಸಂ-
ಮದದಿಂದೆಚ್ಚೊಡೆ ಸಚ್ಚರಿತ್ರವಿಭು ನಿಷ್ಕಾಮಿ ಸ್ವತಂತ್ರಂ ಸಕೋ-
ಪದೆ ಭುರ್ಭುಗಿಲೆಂಬಿನಂ ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋ-
ವದೆ ಸುಟ್ಟಂ ಮದನಾರಿ[೮] ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೪೦

---

೧ ಬಾರವೆ (ಪಾ) ೨ ವಿಭುವಂ (ಪಾ) ೩ ನಾನಾದನುಜಾಂಗ(ತಾ) ೪ ಸಾವರನೋವೊ (ಪಾ)
೫–೫ ಳಂತವನ (ಪಾ) ೬ ಪೇಳ್ವೆನೇ (ಪಾ) ೭ ಪುರ್ಬಿಸಿ (ಪಾ) ೮ ಮಜಭಾಪು (ಪಾ)

ಮುಳಿದು ಭುಗಿಲ್ಭುಗಿಲ್ಭುಗಿಲೆನಲ್ ಸುಡನೇ ತ್ರಿಪುರಂಗಳಂ ಪೊಡ-
ರ್ಱಳಿಯೆ ಘರಿಲ್ಘರಿಲ್ಘರಿಲೆನಲ್ ಸುಡನೇ ಕುಸುಮಾಸ್ತ್ರನಂ ಕರಂ
ಕಳಿಯೆ ಛಿಳಿಲ್ಛಿಳಿಲ್ಛಿಳಿಲೆನಲ್ ಸುಡನೇ ಯಮನಂ ಮನುಷ್ಯ ನೀಂ
ತಿಳಿವೊಡನೀತಿಯಂ ಬಿಸುಟು ನಂಬಿ ಶರಣ್ಬುಗು ಹಂಪೆಯಾಳ್ದನಂ ೪೧

ಭಕ್ತರ ಬಂಧು ಭಕ್ತರ ಮಹಾನಿಧಿ ಭಕ್ತರ ಭಾವಸಂಪದಂ
ಭಕ್ತರ ಮಾತೆ ಭಕ್ತರ ಪಿತಂ ನಿಜಭಕ್ತರ ಪುಣ್ಯದೆಳ್ತರಂ
ಭಕ್ತರ ಮೂರ್ತಿ ಭಕ್ತರ ಸುಧಾಂಬುಧಿ ಭಕ್ತರ ಜೀವದುನ್ನತಂ
ಭಕ್ತರ ಪೆಂಪು ಭಕ್ತಜನಕಂ ನೆಱೆ[೨] ಹಂಪೆಯ ದೇವನೊಚ್ಚತಂ ೪೨

ಶರಣಂ ಸಂಸಾರಿಯೇ ಮಾಣ್ ಪುಸಿ ಪುಸಿ ಶರಣಂ ಕಾಮಿಯೇ ಪೇೞಲೆಂತುಂ
ಶರಣಂ ತಾಂ ಕ್ರೋಧಿಯೇ ಸಲ್ಲದು ತೆಗೆ ಶರಣಂ ಮರ್ತ್ಯನೇ ಅಲ್ಲವೈ ಕೇಳ್
ಶರಣಂ ನಿರ್ವಾಯನೆಂತುಂ ಶರಣನತುಳನಿಷ್ಕಾಮಿಯೆಲ್ಲಂದದಿಂದಂ
ಶರಣಂ ಶಾಂತಂ ಸುಮರ್ತ್ಯಂ[೧] ಶರಣನಮಮ ತಾನೇ ವಿರೂಪಾಕ್ಷಲಿಂಗಂ ೪೩

ಆದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ ವೇದೋಕ್ತಮೋ ಬೇಂಟೆಯಾ-
ಡಿದ ಜೊಮ್ಮಣ್ಣನ ಭಕ್ತಿಭಾವವಱಿಯಲ್ ವೇದೋಕ್ತಮೋ ತಂದೆಯಂ-
ನ್ನದೆ ಚಂಡೇಶ್ವರಪಿಳ್ಳೆಯಾಡಿದುದು ತಾಂ ವೇದೋಕ್ತಮೋ ಆತನೊ-
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೪೪

ಉಣಿಸುಂ ಸ್ತ್ರೀಸಂಗಮುಂ ನಿದ್ರೆಯುಮಿವು ಮಲಮೂತ್ರಂಗಳುಂ ಕುಂದಗುಂ ಸದ್-
ಗುಣಮುಂ ಶಾಂತತ್ವಮುಂ ಕಾಂತಿಯುಮುರುತರಮಾರೋಗ್ಯಮುಂ ಪೆರ್ಚುಗುಂ ಸಂ-
ದಣಿಸಿರ್ದಾ ಕ್ರೋಧಮುಂ ಲೋಭಮು[೩]ಮತಿಭಯಮುಂ ಮೋಹಮುಂ ಗರ್ವಮುಂ ತ-
ಲ್ಲಣಮುಂ ತೀರ್ಗುಂ ದಿಟಂ ನಿಮ್ಮಯ ನಿಜಶರಣಂಗಂ ವಿರೂಪಾಕ್ಷಲಿಂಗಾ ೪೫

ಪರಿಕಿಪರುಂಟೆ ಹಂಪೆಯಧಿನಾಥನ ಭಕ್ತರ ಸದ್ಗುಣಂಗಳಂ
ಹರಹರ ಪೇೞ್ವೊಡೆನ್ನಳವೆ ಕೇಳ್ವೊ[೪]ಡದಾರಳವೈ[೪] ಪುರಾತನರ್
ಪರಿದುದೆ ಗಂಗೆ ನಿಂದೊಡದು ತೀರ್ಥಮೊಡರ್ಚಿ[೫]ತೆ ಕಾರ್ಯಮೆಂದುದೇ
ಹರವರಿಯಿ[೫]ರ್ದುದೇ ಸಭೆ ನಿರೀಕ್ಷಣೆಗೆಯ್ದುದೆ ಲೋಕಪಾವನಂ ೪೬

---

೧ ನಿತಾಂತಂ (ಪಾ) ೨ ಮಾ (ಪಾ) ೩ ಮತ್ಸರ (ಪಾ) ೪-೪ ಡೆ ನಿನ್ನಳವೇ (ಪಾ) ೫-೫ ದುದೇ ಸುಕಾರ್ಯ ಮಿ|ನ್ನಱಿಯುವರಿ (ಪಾ)

ಇದು ದಿಟವೆಮ್ಮ ಹಂಪೆಯಧಿನಾಥನ ಭಕ್ತರ ಮುಂದದಾವನೋ
ಆದಿರದೆ ನಿಲ್ವನಂತಕ-ಮನೋಜ-ಚತುರ್ಮುಖನಬ್ಜನೇತ್ರನೆಂ-
ದೊದವಿದತರ್ಕ್ಯರೆಂಬವರ್ಗೆ ಸುಟ್ಟಿಸಬಾರದು ರೂಹುದೋಱಬಾ-
ರದು ತಲೆಯೆತ್ತ ಬಾರದೆಮೆಯಿಕ್ಕಲೆ ಬಾರದಿಳಾತಳಾಗ್ರದೊಳ್ ೪೭

ಉರಿ ನಡೆವಂತೆ ಭಾನು ನಡೆವಂತೆ ಸಿಡಿಲ್ ನಡೆವಂತೆ ನಿನ್ನ ಭ-
ಕ್ತರ ನಡೆ ದೂಷಕಾವಳಿಗೆ ಹಂಪೆಯ ದೇವಸು[೧]ಸಾತ್ತ್ವಿಕರ್ಗೆ ಸ-
ಚ್ಚರಿತಶಿವಾರ್ಚಕರ್ಗೆ ಸುಖ[೨]ಪೂರಿತಶಾಂತಿವಿಭೂಷಣರ್ಗೆ ಕೇಳ್
ಸಿರಿ ನಡೆವಂತೆಯಿಂದು ನಡೆವಂತೆ ಸುಖಂ ಸುಳಿವಂತೆ ಧಾತ್ರಿಯೊಳ್ ೪೮

ಘನಚೋದ್ಯಂ ನಿನ್ನ ಭಕ್ತಾಳಿಯ ನಡೆವಳಿ ಬೇಱೊಂದು ಸಂಸ್ಪೃಷ್ಟಿ[೩]ಬೇಱೊಂ-
ದು ನಿಜಂ ಬೇಱೊಂದು ದೇಹಾಕೃತಿ ಹರಹರ ಬೇಱೊಂದು ಸಂಪತ್ತಿ ಬೇಱೊಂ-
ದನು ಬೇಱೊಂದಿಚ್ಛೆ ಬೇಱೊಂದಘಟಿತಘಟಿತಂ ಬೇಱದೊಂದಾಜ್ಞೆ ಬೇಱೊಂ-
ದಿನಿದಾಹಾ ಕೌತುಕಂ ಬಣ್ಣಿ[೪]ಸಲರಿದರಿದೋ ಹೋ ವಿರೂಪಾಕ್ಷಲಿಂಗಾ ೪೯

ಜಾಣರದುಂಟದುಂಟಹಹ ದುರ್ವಿಷಯಂಗಳನೊಂದಿ ಬಾಳ್ವವರ್
ಜಾಣರದುಂಟದುಂಟಕಟ [೫]ಕರ್ಮದ ಕೈಯೊಳೆ ಸತ್ತು ಹೋದ[೫]ವರ್
ಜಾಣರದುಂಟದುಂಟಮಮ [೬]ಕಾಲನ ಬಾಧೆಗೆ ಬಿಳ್ದು ನೋವ[೬]ವರ್
ಜಾಣರೆ ಜಾಣರಿಂದಿಹಪರಕ್ಕೆಲೆ ಭಕ್ತರೆ ಹಂಪೆಯಾಳ್ದನಾ ೫೦

ಇಲ್ಲಿ ಜಗಕ್ಕೆ ಪೂಜಿತರುಮಲ್ಲಿ ಪರಕ್ಕೆ ವಿಶೇಷಪೂಜ್ಯರಿಂ-
ತಿಲ್ಲಿಯುಮಲ್ಲಿಯುಂ ಮೆಱೆವರೆಲ್ಲಿಯುಮೆಮ್ಮ ಶಿವಾರ್ಚಕರ್ಗೆ ಮಾಣ್
ಎಲ್ಲಿಯು ವಿಷ್ಣುವೆಲ್ಲಿಯಜನೆಲ್ಲಿಯ ವಾಸವನೆಲ್ಲಿಯಗ್ನಿಯಿಂ-
ತೆಲ್ಲಿಯ ಮಾತು ಮೂಜಗದೊಳಾರ್ ಸರಿ ಪೇಳಲೆ ಹಂಪೆಯಾಳ್ದನೇ ೫೧

ಕಲಿಯಾತಂ ಕಾಂತನಾತಂ ಸುಮನಚ[೭]ರಿತನಾತಂ ಕಲಾಕಲ್ಪನಾತಂ
ಕಲೆಯಾತಂ ಭೋಗಿಯಾತಂ ಚತುರ[೮]ವಿನುತನಾತಂ ಚಿದಾನಂದನಾತಂ
ಛಲಿಯಾತಂ ಸತ್ಯದಾತಂ ಬುಧಜನಹಿತನಾತಂ ಜಗತ್ಪೂಜ್ಯನಾತಂ
ಸಲೆ ನಿಮ್ಮಂ ನಂಬಿ ನಿಚ್ಚಂ ಮಱೆಯದೆ ನೆನೆವಾತಂ ವಿರೂಪಾಕ್ಷಲಿಂಗಂ[೯] ೫೨

---

೧ ನೆ (ಪಾ) ೨ ಸಲೆ (ತಾ) ೩ ಸತ್ಸಂಸ್ಥೆ (ಪಾ) ೪ ಸುಟ್ಟೆ (ಪಾ) ೫–೫ ಕಾಲನ ಬಾರಿಗೆ ಬಿಳ್ದು ನೋವ (ಪಾ) ೬–೬ ದುಸ್ಪೃಹೆ ಹೊತ್ತಿ ಮುಸುಂಕಿ ಸಾವ (ಪಾ) ೭ ಕುಮುನಭ (ಪಾ) ೮ ಭರಣ (ಪಾ) ೯ ಗಾ (ಪಾ)

ನೋಡಿತೆ ಮಂಗಳಂ ನೆನಪೆ ಮಂಗಳಮಿರ್ದೆಡೆ ಮಂಗಳಂ ಕರಂ
ಪಾಡಿತೆ ಮಂಗಳಂ ಶರಣರೆಂದುದೆ ಮಂಗಳವೊಲ್ದವರ್ ಮನಂ-
ಗೂಡಿತೆ ಮಂಗಳಂ ನಡೆಯೆ ಮಂಗಳಂ ಮಾಡಿತೆ ಮಂಗಳಾತ್ಮಕಂ
ಮಾಡಿತೆ ಮಂಗಳಂ ಹರಮಮಂಗಳವೈ ಎಲೆ ಹಂಪೆಯಾಳ್ದನೇ* ೫೩

ಕಲಿಯಾವಂ ಶಿವಭಕ್ತನಚ್ಚಸುಖಿಯಾವಂ ಭಕ್ತನಾವರ್ತ[1]ದಿಂ
ಛಲಿಯಾವಂ ಶಿವಭಕ್ತನುತ್ತಮನದಾವಂ ಭಕ್ತನೆಲ್ಲಂದದಿಂ
ಬಲಿಯಾವಂ ಶಿವಭಕ್ತನೂರ್ಜಿತನದಾವಂ ಭಕ್ತನೀಶಂಗೆ ಬೇ-
ಳ್ಪೊಲನಾವಂ ಶಿವಭಕ್ತ[2]ನಾತನೆಲೆ ಸದ್[2]ಭಕ್ತಂ ವಿರೂಪಾಕ್ಷನಾ ೫೪

ಕೊಂದಂ ಭಕ್ತಿಪುರಸ್ಸರಂ ಮಗನನಾ ಶ್ರೀಯಾಳಗೇನಾಯ್ತು ಮೇಣ್
ಕೊಂದಂ ಭಕ್ತಿಪುರಸ್ಸರಂ ಜನಕನಂ ಚಂಡೇಶಗೇನಾಯ್ತು ಪೋ
ಕೋದಂ ಭಕ್ತಿಪುರಸ್ಸರಂ ಜನನಿಯಂ [3]ರಾಮಂಗದೇನಾಯ್ತು ಕೇಳ್
ಕುಂದೇ ತಾನದು[3] ಭಕ್ತಿಯುಳ್ಳೊಡೆ ಸದಾಚಾರಂ ವಿರೂಪಾಕ್ಷನಾ ೫೫

ಮದಮಂ ಮಾಣ್ದು ದುರಾಶೆಯಂ ಪಱಿದು ಕಾಮಾಸಕ್ತಿಯಂ ಬಿಟ್ಟು ಸ-
ಮ್ಮದದಿಂ ಲಿಂಗಮನೊಲ್ದು ನೋಡಿ ನಲಿವಾ ಸದ್ಭಕ್ತನಂತಾತನಿ-
ರ್ದುದೆ ತಾರಾಚಲಮಾತನಿರ್ದುದೆ ಹಿಮಾದ್ರೀಂದ್ರಂ ಬಳಿಕ್ಕಾತನಿ-
ರ್ದುದೆ ವಾರಾಣಸಿಯಾತನಿರ್ದುದೆ ವಿರೂಪಾಕ್ಷಂಗೆ ಪಂಪಾಪುರಂ ೫೬

ಪೆಱತೊಂದಂ ನುಡಿಯಂ ಪ್ರಪಂಚರಹಿತಂ ಕಾರ್ಪಣ್ಯಮಂ ಮಾಡ[4]ನೆ-
ಳ್ದೆ[4]ಱಗಂ ಕಾಮದ ಬಟ್ಟೆಯತ್ತಲೆಳಸಂ ತರ್ಕಕ್ಕೆ ಮಾತ್ಸರ್ಯವೆಂ-
ದಱಿಯಂ ಲೋಕದ ಮಾನವರ್ಗೆ ಮಣಿಯಂ ಸದ್ಭಕ್ತಸತ್ಸಂಗಮಂ
ತೊಱೆಯಂ ಸತ್ಯಮನಲ್ಲದಾಡನಚಲಂ ಭಕ್ತಂ ವಿರೂಪಾಕ್ಷನಾ ೫೭

ನಿರ[5]ಪೇಕ್ಷಂ ಕರುಣಾಕರಂ ಸುಖಮಯಂ ಶಾಂತಂ ಮಹೋತ್ಸಾಹಿ ಭ-
ಕ್ತಿರತಂ ಮಂಗಳಮೂರ್ತಿ ಲಿಂಗಸುಭಗಂ[6] ಸಂತೋಷಿ ಸತ್ಯಂ ಮಹೇ-
ತ್ಸರನುರ್ವೀಜನವಂದ್ಯನುನ್ನತನನೇಕಾಶ್ಚರ್ಯಯುಕ್ತಂ ಮಹೇ-
ಶ್ವರನಾತಂಗರಿದುಂಟೆ ಹಂಪೆಯ ವಿರೂಪಾಕ್ಷಪ್ರಸಾದಾನ್ವಿತಂ ೫೮

---

೧ ವೃತ್ತ (ಪಾ) ೨-೨ ನುನ್ನತ ಯಶಂ (ಪಾ) ೩-೩ ತಾಂ ರಾಮನಾಥಂಗದೇಂ|ಕುದಾಯ್ತೋ ತೆಗೆ (ಪಾ) ೪-೪ ನೊ|ಲ್ದೆ (ಪಾ) ೫ ರು (ತಾ) ೬ ಲಭಂ (ಪಾ)

* ಈ ಪದ್ಯ ಮುದ್ರಿತ ಪ್ರತಿಯಲ್ಲಿ ೫೨ ನೆಯ ಪದ್ಯದ ಮೊದಲು ಬಂದಿದೆ.

ಶಿವಭಕ್ತರ್ ಮುಟ್ಟಿದಂಭಃಕಣಮೆ ಸಕಲತೀರ್ಥಂಗಳೆಂದೆಂಬುದಂ ಕಂ-
ಡೆವಲಾ ಕಣ್ಣಪ್ಪನೊಳ್ ಮಾಡಿದುದೆ ಜಗಕೆ ಸನ್ಮಾರ್ಗವೆಂದೆಂಬುದಂ ಕಂ-
ಡೆವಲಾ ಜೊಮ್ಮಣ್ಣನೊಳ್ ಮೆಟ್ಟಿದ ಧರೆ ಪರಮ ಕ್ಷೇತ್ರಮೆಂದೆಂಬುದಂ ಕಂ-
ಡೆವಲಾ ಭೋಗಣ್ಣನೊಳ್ ಹೋ ಶರಣರೆ ಪರದೈವಂ ವಿರೂಪಾಕ್ಷ[೧]ಲಿಂಗಾ[೧] ೪೯

ನತರಾಗಲ್ ಕಾದಪರ್[೨] ನಿಂದೊಡೆ ಸರಭ[೨]ಸದಿಂ ಕೊಂದಪರ್ ಭೀತಿಯೊಳ್ ಸಂ-
ಯುತರಾಗಲ್ ಬಿಟ್ಟಪರ್ ತಾಂ ಮಱಿವುಗಲ[೩]ಸುವಿತ್ತ್ಯಾಗ ಸ್ಥೈತೊಡಲ[೩]ತ್ಯ-
ನ್ನತೆಯಿಂ ನಾಕೋರ್ವಿಯಿಂ ಜೀವಮನುರೆ ಕುಡವರ್ ಮಾನದೊಳ್
ಶೌರ್ಯದೊಳ್ ವಾ-
ರತೆಯೊಳ್ ಭಕ್ತರ್ಗೆ ಪೋ ಮಾಣ್ ಸರಿದೊರೆ[೪]ಸಮನಾವಂ ವಿರುಪಾಕ್ಷಲಿಂಗಾ[೪] ೬೦

ಇವನಂ ನೋಡಿದ ಕಣ್ಗೆ ಮತ್ತೆ ಕೆಲವುಂ ರೂಪೇ ವಿರೂಪಾಕ್ಷನೆಂ-
ಬವನಂ ಪುಟ್ಟಿದ ಕೈಗೆ ಮತ್ತೆ ಕೆಲವುಂ ಮೆಯ್ಯೇ ಪೆಸರ್ಗೇಳ್ದ ಮ-
ಚ್ಛ್ರವಣಕ್ಕಕ್ಕಟ ನೋಡೆ ಮತ್ತೆ ಕೆಲವುಂ ನಾಮಂಗಳೇ ಸ್ತೋತ್ರಮಂ
ಸವಿವಾ[೫] ನಾಲಗೆಗೊರ್ಮೆ ಮತ್ತೆ ಕೆಲವುಂ ಮಾಣ್ ಮಾಣು ಶಬ್ದಂಗಳೇ ೬೧

ಮೃಡನಿರ್ದಂತಿರೆ ಕೋಟಿಕೂಟಕುಳ[೬]ದೈವಕ್ಕಾಸೆಯಂ ಮಾ[೭]ಡಿ ನೀಂ[೭]
ಕಿಡದಿರ್ ಮಾನವ ಬೇಡ ಬೇಡೆಲೆಲೆ ಪೂಣ್ಗೊಂಡಕ್ಕಟಾ ಸಾರಿದೆಂ
ನಡೆನೋಡರ್ಚಿಸು ಕೀರ್ತಿಸಾದರಿಸು ಪೆರ್ಚಾ[೮]ನಂದದಿಂ ಬೇಡು ಬ-
ಲ್ಪಿಡಿ ನಂಬೀ[೯]ಗಳೆ ನ[೧೦]ಚ್ಚು ಮೆಚ್ಚು ನಲವಿಂದೆಂದುಂ ವಿರೂಪಾಕ್ಷನಂ ೬೨

ಸಾಲದೆ ನಿನ್ನ ಚಂಚಲತೆ ಸಾಲದೆ ನಿನ್ನ ಮದೋದ್ಧತಾಗುಣಂ
ಸಾಲದೆ ನಿನ್ನ ದುರ್ಮತೆ ಸಾಲದೆ ನಿನ್ನ ತಮೋವಿವರ್ಧನಂ
ಸಾಲದೆ ನಿನ್ನ ದುಷ್ಪ್ರಕೃತಿ ಸಾಲದೆ ನಿನ್ನ ದುರಾಶೆಯುಜ್ಜುಗಂ
ಸಾಲದೆ ಮೋಹದಿಂಪು ಮನವೇ ನೆನೆ[೧೧] ಹಂಪೆಯ ದೇವರಾಯನಂ[೧೧] ೬೩

ಅಕ್ಷಯಸಂಪದಂ ಕಿಡದ ಕೀರ್ತಿಯನೂನಪರಾಕ್ರಮಂ ಧರಾ-
ಈಕ್ಷಣಶಕ್ತಿ ದರ್ಪಕನನೇಳಿಪ ರೂಪಿನಿತೆಲ್ಲವಣ್ಣಾ ಕೇಳ್
ಈ ಕ್ಷಣದಿಂದೆ ಬರ್ಪುವೆಲೆ ಮಾನವ ನಂಬಿಯ[೧೨]ಹರ್ನಿಶಂ ವಿರೂ-
ಪಾಕ್ಷನನರ್ಚಿಸುನ್ನತನನರ್ಚಿಸಜಾತನನರ್ಚಿಸಲ್ಕಱಿಂ ೬೪

---

೧-೧ ನಿನ್ನಾ (ಪಾ) ೨-೨ ನಿಂದಿರಲಸವ (ಪಾ) ೩-೩ ಘುಪೂಗಂ [?] ಪದಂದರ್ಪಣ [ಪಾ] ೪-೪ ಸಮನಿನ್ನಾರುವಿಲ್ಲಂದುಮೆಂದುಂ (ತಾ) ೫ ದಾ (ಪಾ) ೬ ಱಿ (ಪಾ) ೭-೭ ಡದಿರ್ (ಪಾ) ೮ ಮತ್ತಾ [ಪಾ] ೯ ನಚ್ಚೀ (ತಾ) ೧೦ ಮ (ತಾ) ೧೧-೧೧ ಹೆಂಪಿನ ಹಂಪೆಯಾಳ್ದನಾ (ಪಾ) ೧೨ ಮಾಣದ (ಪಾ)

ಬಿಡು ಕರ್ಮಂ ದೈವಮೆಂದೆಂಬವರಳಿನುಡಿಯಂ ಬ್ರಹ್ಮರೊಳ್ ದಕ್ಷನೆಂಬಂ
ಮೃಡನೇಕೆಂದೆಲ್ಲರಂ ಬಲ್ಲರನೆ ನೆರಪಿ ಕೊಂಡಾಡಿದಾ ಯಜ್ಞ ಕರ್ಮಂ
ಗಡ ಭಸ್ಮೀಭೂತವೇನಾಗದೆ ಸುಡು ಸುಡು ಮತ್ತಂ ವೃಥಾಕರ್ಮವೆಂದು-
ಗ್ಗಡಿಸಲ್ವೇಡೊಲ್ದು [1]ಬೇಡೆಮ್ಮ[1]ಭವನನೊಸೆದೀವಂ ವಿರೂಪಾಕ್ಷಲಿಂಗಂ ೬೫

ಬಿಡು ಮಾಣ್ ಮಾಣೆಲೆ ಬೊಮ್ಮವಾದಿ[2] ಮೊಲೆಯೊಳ್ ಕೇಳ್[2] ನಂಬಿಗೋ ಎನ್ನನೇ
ಮೃಡನೆದ್ದಾಡನೆ ನಮ್ಮ ಗುಂಡಯನ ಮುಂದಾ ದಾಸಿಮಯ್ಯಂ ಕುಡಲ್
ಉಡನೇ ಸೀರೆಯನುಣ್ಣನೇ ಸಿರಿಯನಾಳ್ವಂ ಪೇಳೆ ಕೈಲಾಸಮಂ
ಕುಡನೇ[3] ಸೂಳೆಯ ಚೇರಮಾಂಕ[3]ಗೆ ವಿರೂಪಾಕ್ಷಂ ಲಲಾಟೇಕ್ಷಣಂ ೬೬

ಕೊಡಗೂಸೊರ್ವಳದೊಂದು ಬಟ್ಟಲೊಳೆ ಪಾಲಂ ತಂದು ಮುಂದಿಟ್ಟು ನೀಂ
ಕುಡಿಯೆಮ್ಮಪ್ಪೆ ದಿಟಂ ಕರಂ ಬಡಿವಂದೆಳ್ತಳ್ತು ಕಾರ್ಪಣ್ಯದಿಂ
ನುಡಿಯಲ್ಕಾ ನುಡಿಗಂಜಿ ತಾನರರೆ ಕಾರುಣ್ಯಾಕರಂ ಜೋಳಿಯಿಂ
ಕುಡಿದಂ ಪಾಲನದೇಂ ಕೃಪಾಳುವೊ ವಿರೂಪಾಕ್ಷಂ ಲಲಾಟೇಕ್ಷಣಂ ೬೭

ಮುದಮಂ ಧಾತ್ರಿಗೆ ಮಾಳ್ಪುದಾವುದು[4] ಗುಣಾಧೀಶಾಭಿಧೇಯಕ್ಕದಾ-
ವುದು ವಾಚಾ[4]ಸ್ಪದಮೆಂಬುದಾವುದು ಶಿವಾ[5]ಚಾರಂ ಶಿವಾಚಾರಮ-
ಲ್ಲದೆ ಬೇಱಿಲ್ಲದು ತಾನೆ[6]ಯೂರ್ಜಿತ ಗಡಂ ನಂಬೀಗ ಮಱುಂ[6]ಸಾರ್ದು ನೀಂ
ಪದಪಿಂ ಮಾನವ ಮಾಡು ಲೇಸಿದು ಶಿವಾಚಾರಂ ವಿರೂಪಾಕ್ಷನಾ ೬೮

ಅನುಪಮಮಾರ್ಗವೆಮ್ಮ ಶಶಿಮೌಳಿಯ ಸಚ್ಚರಿತಂ ಧರಿತ್ರಿಗೊ-
ರ್ವನೆ ಗಣನಾಥನೆಂಬ ಶಿವಭಕ್ತನ ನೇಮವನೊಲ್ದು ನೋಡಿ[7]ಮ-
ಚ್ಚನೆ[7]ಸುಖದೋ[8]ಱಿ ಲೋಕವಱಿಯಲ್ ಪೆಗಲೇಱಿಸಿ ಕೊಂಡುಪೋದನಾ-
ತನನನಿಮಿತ್ತಬಂಧುವನದೇನೆನುತಿರ್ದಪೆ ಹಂಪೆಯಾಳ್ದನಂ ೬೯

ಸ್ಮರನಿಂ ಬೆಂದುರಿವಂಗೆ ರೋಗತತಿಯಿಂದಂ ನೊಂದಳಲ್ವಂಗೆ ನಿ-
ಷ್ಠುರಮುಗ್ರಂ ಕಲ್ಮಷಂಗಳಿಂ ಬಳಲ್ವವಂಗತ್ಯುಗ್ರತಾಪಂಗಳಿಂ
ಕೊರಗುತ್ತಳ್ಕುವವಂಗೆ ಶತ್ರುಭಯದಿಂ ಬೇಳಾಗಿ ಬೀಳ್ವಂಗೆ ಸಾ-
ದರದಿಂ ಕಾಯಲಿದೊಂದೆ ಸಾಲ್ವುದು ದಿಟಂ ನಾಮಂ ವಿರೂಪಾಕ್ಷನಾ ೭೦

---

೧–೧ ಪಂ ಬೇಡ (ಪಾ) ೨-೨ ಸಟೆಯಂ ನೀಂ (ಪಾ) ೩–೩ ಸೂರಯಃನೆಮ್ಮ ನಂಬಿ (ಪಾ) ೪-೪ ಶಿವಾಚಾರಂ ಗಣಾಧೀಶನ|ಭ್ಯುದಯಕ್ಕಾ (ಪಾ) ೫ ಸದಾ (ಪಾ) ೬-೬ ವಾಂಛಿತಕರಂ ನಂಬಾಗಳುಂ (ಪಾ) ೭–೭ ನಚ್ಚಿನ (ಪಾ) ೮ ವೇ (ಪಾ) ೯ ಪರು (ಪಾ)

ಮನವೊಸೆದರ್ಚಿಸರ್ಚಿಸು ಪೊಗಳ್ ಪೊಗಳಾಳ್ದನನಾಳ್ದಸಂ ಕರಂ
ನೆನೆ ನೆನೆ ನೋಡು ನೋಡು ಮಱೆಗೊಳ್ ಮಱೆಗೊಳ್ ನೆಱೆನಂಬು ನಂಬು ಕೆ-
ಮ್ಮನೆ ಕೆಡಬೇಡ ಬೇಡ ಭರದಿಂ ಸಲೆ ಮಚ್ಚೆಲೆ ಮಚ್ಚು ಮಚ್ಚು ವಂ-
ಚನೆಗಿಡೆ ನಚ್ಚು ನಚ್ಚು ಮಿಗೆ ಬಲ್ವಿಡಿ ಬಲ್ವಿಡಿ ಹಂಪೆಯಾಳ್ದನಂ ೭೧

ಭರದಿಂ ಲಿಂಗಾರ್ಚನಂ [೧]ಮಾಡುವ ಶಿವಕುಲವೊಂದೇ[೧] ಶಿವಾಚಾರಮಂ ಸ-
ದ್ಗುರುದೇವನಂ ಪೇಳ್ದನೆಂತೆಂತವರವರೊಲವಿಂ ಸ್ವೇಚ್ಛೆಯಿಂ ಶರ್ವನಂ ಶಂ-
ಕರನಂ ಸರ್ವೇಶನಂ ಪೂಜಿಸುವುದಱೊಳೆಯುಂ ತಾಯಿತಿಂತಾಯಿತೆಂದೆ-
ಲ್ಲರು[೨]ಮೆಂದಾಪೇಕ್ಷೆಯಿಂ[೨] ನೀಂ ಕಿಡದೆ ನೆನೆ ವಿರೂಪಾಕ್ಷನಂ ಕಾಂಕ್ಷೆಯಿಂದಂ ೭೨

ಗುರುಮತದಿಂ ಶ್ರುತಿಸ್ಮೃತಿಮತಂಗಳಿನಿಷ್ಟಮತಂಗಳಿಂದಮಾ-
ದ್ಯರ ಮತದಿಂದೆ ನೀನೊಡೆಯನೆಂದಱಿದೀಶ್ವರ ನಿಮ್ಮನರ್ಚಿ[೩]ಸು-
ತ್ತಿರದಿರದೆಲ್ಲರೊಳ್ ಮಥಿಸಿ[೩]ತರ್ಕಿಸಿ ನೋಯಿಸಿ ನೋಯುತುಂ ವೃಥಾ
ನೆರವುನೆಗಳ್ತು ಕಣ್ಗೆಡುವರೇಂ ಮರುಳ್ಗೊಂಡರೊ ಹಂಪೆಯಾಳ್ದನೇ ೭೩

ತೆಗೆ ತೆಗೆ ಮಿಕ್ಕ ಕೂಟಕುಳಿದೇವರನಾವಗಮುರ್ಕಿದಳ್ಕಱಿಂ
ಬಗೆ ಬಗೆ ಚಂದ್ರಚೂಡ[೪]ನ ಪದಾಂಬುಜಮಂ ಮನವಾಱೆ ಭಕ್ತಿಯಿಂ-
ದಗಿದಗಿದಂಗದೊಳ್ ಪುಳಕವೇಳ್ತರಲೆಳ್ದು ಪೊರಳ್ದು[೫] ಲೀಲೆಯಿಂ
ನೆಗೆನೆಗೆದಾಡ ಮೆಯ್ಮಱೆದು ಪೂಜಿಸು ಮಾನವ ಹಂಪೆಯಾಳ್ದನಂ ೭೪

ಇದು ದಲಪೂರ್ವಮೀ ಮನುಜಜನ್ಮದೊಳುದ್ಭವಿಸಿರ್ದು ಮೂಗನಾ-
ಗದೆ ಸಲೆಯಂಧನಾಗದಿರೆ[೬] ಪಂಗುಳನಾ[೭]ಗದೆ ಕೂನದೇಹನಾ-
ಗದೆ ವಿಕಟಾಂಗನಾಗದೆ ಕಿವುಂಡನೆಯಾ[೮]ಗದೆ ಹೀನವರ್ಣನಾ-
ಗದೆ ಮೆಱೆವಲ್ಲಿ ಪೂಜಿಸು ಮಹೋತ್ಸವದಿಂದೆಲೆ[೯] ಹಂಪೆಯಾಳ್ದನಂ ೭೫

ಆಱುತುಮರ್ಚಿಸುಬ್ಬರಿಸುತರ್ಚಿಸು ಮತ್ತೊಲೆಯುತ್ತುಮರ್ಚಿಸಿಂ-
ಪೇಱುತುಮರ್ಚಿಸುನ್ನತಿಯೊಳರ್ಚಿಸು ಕೊರ್ವುತುಮರ್ಚಿಸೆಲ್ಲರೊಳ್
ಪೋ[೧೦]ಱುತಮರ್ಚಿಸೀ ಜನನಮಂ ಪಡೆದಲ್ಲಿ ಮನುಷ್ಯ ಏನುಮಂ
ಪಾಱದೆಯರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ೭೬

---

೧-೧ ಮಾಡದ ಶಿವಕುಲವುಂಟೇ (ಪಾ) ೨-೨ ಮಂದಾಕ್ಷೇಪದಿಂ (ಪಾ) ೩-೩ಸ|ಲ್ಕರಿಯದೆ ಸರ್ವರೊಳ್ ಪರಿದು (ಪಾ) ೪-೪ ಜೂಟ (ತಾ) ೫ ಗಳ್ದು (ತಾ) ೬ ದೆಲೆ (ಪಾ) ೭ ವುವಾ (ಪಾ) ೮ ನುವಾ (ಪಾ) ೯ ನೆನೆ (ಪಾ) ೧೦ ಸೇಱು (ಪಾ)

ಪಿರಿದಿದು[೧]ಸಾರಿ[೨]ದಪ್ಪೆನೆ[೨]ಲೆ ಸಾರಿದೆನಕ್ಕಟ ಸಾರಿದೆಂ ವೃಥಾ
ಚರಿ[೩]ಸದಿರಿಲ್ಲಿ ಪುಟ್ಟುವುದಪೂರ್ವಮಪೂರ್ವಮುದಾಗಿಯುಳ್ತಿಯಿಂ-
ದಿರೆ[೪]ನಲಿದುರ್ಬಿ ಬೊಬ್ಬಿಡುತೆ ಕೊರ್ಬುತೆ ಕೂಗುತೆ ಪಾಡುತಾಡುತ-
ಬ್ಬರಿ[೫]ಸುತೆ ಬೇಗಿ ತೂಗುತೊಸೆದರ್ಚಿಸು ಮಾನವ ಹಂಪೆಯಾಳ್ದನಂ ೭೭

ಮನೆ ನೆಳಲಾಗೆ ಪೆಂಡಿರಿನಿದಾಗೆ ಸುತರ್ ಪಿರಿದಾಗೆಯರ್ಥದಾ-
ರ್ಜನೆ ಘನವಾಗೆ ಯೌವನಮುದಾಗೆ ಬಳಿಕ್ಕದನೇನನೆಂದಪೆಂ
ತನತನಗು[೬]ರ್ವುತುಂ ಬಿಡದೆ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ[೬]
ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ[೭] ಹಂಪೆಯಾಳ್ದನೇ ೭೮

ವರಮುಖ್ಯಂ ಶಂಕರಾಖ್ಯಂ ಸಕಲಜನಹಿತೋಪಾಖ್ಯನಾನಂದಸೌಖ್ಯಂ
ಸ್ಥಿರಕಾಯಂ ತಾನಜೇಯಂ ಧವಳತರತನುಚ್ಛಾಯನಾನಂದಗೇ[೮]ಯಂ
ಪರಿಪಾ[೯]ಲಂ ಗೀತಲೋಲಂ ಕಮಲಭವಶಿರಶ್ಮಾಲನೌದಾರ್ಯಶೀಲಂ
ಕರುಣಾಂಗಂ ಭಕ್ತ[೧೦]ಸಂಗಂ ಮನಸಿಜಮದಭಂಗಂ ವಿರೂಪಾಕ್ಷಲಿಂಗಂ ೭೯

ಎನಗಾಳ್ದಂ ತಾನೆ ನೀಳ್ದಂ ಕರಿಪತಿತನುವಂ ಸೀಳ್ದನಿಂತೊಪ್ಪೆ ಬಾಳ್ದಂ
ಘನಗಾಢಂ ವೇದ[೧೧]ಗೂಢಂ ಸಕಲಗುಣಗಣಪ್ರೌಢನತ್ಯಂತರೂಢಂ
ದ್ಯುನದೀಶಂ ಚಿತ್ಪ್ರಕಾಶಂ ಶರಣಜನಸದಾತೋಷನಾನಂದಕೋಶಂ[೧೨]
ಮುನಿಸಂಗಂ ಸತ್ಯಶೃಂಗಂ ಕರುಣರಸತರಂಗಂ ವಿರೂಪಾಕ್ಷಲಿಂಗಂ ೮೦

ಪೊಗಳೆಂ ಮಿಕ್ಕಿನ ಚಕ್ರಪಾಣಿಸರಸೀಜೋದ್ಭೂತಸಂಕ್ರಂದನಾ-
ದಿಗಳಂ ತಾನೆನೆ ಮರ್ತ್ಯಕೀಟಕರ ಮಾತಂತಿರ್ಕೆ ಮತ್ತಾವನಂ
[೧೩]ಬಗೆದಾರೆಂ ಬಿಡದಾ[೧೩]ಹರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾ-
ಲಗೆಯಂ ಮಾಱಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ ೮೧

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯುಕ್ಕಟಾ[೧೪]
ತನತನಗಿಂದ್ರ-ಚಂದ್ರ-ರವಿ-ಕರ್ಣ-ದಧೀಚಿ-ಬಲೀಂದ್ರನೆಂದು ಮೇಣ್[೧೫]
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ೮೨

---

೧ ಎಲೆಲೆಲೆ (ಪಾ) ೨-೨ ದೇನೆಲೆ (ಪಾ) ೩ ಲಿ (ಪಾ) ೪ ನಲಿ (ಪಾ) ೫ ಗ್ಗಲಿ (ಪಾ) ೬-೬ ಗುಬ್ಬುತಂಕುರಿಸುತುಂ ನೆರೆ ಪಲ್ಲವಿಸುತ್ತೆ ಪರ್ವುತುಂ (ಪಾ) ೭ ಮಾಣ್ಬಳೆ (ಪಾ) ೮ ಕಾ (ಪಾ) ೯ ರಕಾ (ಪಾ) ೧೦ ವೀತ (ಪಾ) ೧೧ ಮೋಹ (ತಾ ೧೨ ವೇಷಂ (ತಾ) ೧೩ ಪೊಗಟ್ವ್ವೆಯೆಂಬೆನಿತೇ (ಪಾ) ೧೪ ಪದ್ಯಮಂ (ಪಾ) ೧೫ ತಾನ್ (ಪಾ)

ಎಡಹಿದೊಡಿಲ್ಲ ನಿದ್ರೆ ನಿ    ದೊಡಮಿಲ್ಲುಸಿರಿಕ್ಕುತಿರ್ಪುಸಿರ್
ತಡೆದೊಡಮಿಲ್ಲ ಬಿಕ್ಕು ಬಿಡದೊತ್ತಿದೊಡಂ ತಱಿಸಂದೊಡಿಲ್ಲ ಸೀಂ-
ತೊಡೆ ತನಗಿಲ್ಲ[1] ಕೆಮ್ಮಿದೊಡಮಿಲ್ಲ[2]ದದಸ್ಥಿರಮಿಂ[2]ತು ಕೆಟ್ಟು ಪೋ-
ಪೊಡಲಿದಕೇಕೆ ಕಾಮವಿದಕೇಕೆ ಮದಾಂಧತೆ[3] ಹಂಪೆಯಾಳ್ವನೇ ೮೩

ಜನಿಯಿಸುತಿರ್ಪ ಕೋಟಿಜನನಂಗಳೊಳುತ್ತಮ[4]ಮುತ್ತಮೋತ್ತಮಂ[4]
ಮನುಜಭವಂ ವಿಚಾರಿಪೊಡಿದಂ ಪಡೆದುಂ ಮರುಳಾಗಿ ಸತ್ತೊಡೀ
ಜನನವಿದೆಂದು[5] ಬರ್ಪುದು ವೃಥಾ ಕೆಡದಿರ್ ಕೆಡದಿರ್ ನಿರಂತರಂ
ನಿನಗೆ ಹಿತೋಪದೇಶಮಿದು ಮಾನವ ಪೂಜಿಸು ಹಂಪೆಯಾಳ್ವನಂ ೮೪

ತನ್ನಯ ಕಾಮಮಂ ಸುಡದೆ ತನ್ನಯ ಕೋಪಮುಮಂ ತೆರಳ್ಚದೀ
ತನ್ನಯ ಲೋಭಮೋಹಮನೆ ತನ್ನ ಮದೋನ್ನತ[6]ಮತ್ಸರಾಳಿ[7]ಯುಂ
ತನ್ನೊಳೆ ತಾನೆ ಸಂತವಿಡಲೊಲ್ಲದೆಯನ್ಯರನಿಂತು ಮಾಡೆನು-
ತ್ತುಂ ನೆಱೆ ಪೇಳ್ದು ಬುದ್ಧಿಗಲಿಸಲ್ ತೆಱಪೆಲ್ಲಿತು ಹಂಪೆಯಾಳ್ದನೇ ೮೫

ಹೆಂಡತಿ ಬಾರಳರ್ಥವದು ಬಾರದು ಪುತ್ರರೆ ಬಾರರಿಷ್ಟರುಂ
ಕಂಡ ಸಖೀಜನಂ ಜನನಿಯುಂ [8]ಪಿತನುಂ ನೆಱೆ[8] ಬಾರರಕ್ಕಟಾ
ತಂಡದ ಪಾಪಪುಣ್ಯವಿವೆ ಬರ್ಪವಿವರ್ಕೆ ಮಹೇಶನಂ ನತಾ-
ಖಂಡಲವೃಂದನಂ ಬಿಡದೆ ಪೂಜಿಸು ಮಾನವ ಹಂಪೆಯಾಳ್ವನಂ ೮೬

ನರರಂ ಸೇವಿ[9]ಸುತಯ್ಯ[9] ಜೀಯೆನುತುಮಿರ್ಪೆನೆಂದೊಡಂ ದೈನ್ಯಮು-
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ-
ರ್ಪಿರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ-
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ ೮೭

ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ-
ಳ್ಪಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮ-
ತ್ತಾಗಳೆ ಝುಂಕಿ[10]ಸಲ್ ನಡುಗಿ ಬೀಳುವ ಸೇವೆಯ[11] ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದೆಸೆಯಿಂ ಕರುಣಾಕರ ಹಂಪೆಯಾಳ್ದನೇ ೮೮

---

೧ ಸಲೆಯಿಲ್ಲ (ಪಾ) ೨-೨ ವಿದಿಂತಿರದಿಂ (ಪಾ) ೩ ಮದೋನ್ನತೆ (ಪಾ) ೪-೪ ಮತ್ಯಪೂರ್ವಮೀ (ಪಾ) ೫ ತು (ಪಾ) ೬ ದ್ಧತೆ (ಪಾ) ೭ ದಿ (ಪಾ) ೮-೮ ಬರೆ ನೆಱೆ (ಪಾ) ೯-೯ ರಾಪ ಜೀಯ (ಪಾ) ೧೦ ಬಗ್ಗಿ (ಪಾ) ೧೧ ವಿಪ (ಪಾ)

ಎಲೆಲೆಲೆ ಮೆಟ್ಟಿ ಕೀೞ್ತನಱಿಯಾ ಕಮಲೋದ್ಭವನೂರ್ಧ್ವವಕ್ತ್ರಮಂ
ತಲೆಕೆಳಗಾಗಲೆತ್ತಿಱಿದನಂದಱಿಯಾ ನಲವಿಂ ಮುಕುಂದನ-
ಗ್ಗಲಿಸುವ ದೇಹಮಂ ತೊವಲನುರ್ಚಿದನೆಂದಱಿಯಾ ಗಜಾಸುರಾ-
ಕಲಿತಶರೀರಮಂ ಬಿಡು ಪೊಡರ್ವ[೧]ವನಾವನೊ ಹಂಪೆಯಾಳ್ದನೊಳ್ ೮೯

ಮನುಜರ್ ಗಾವಿಲರೇನನೆಂಬೆನಳಿಮಂಗಾರ್ತಂಗೆ ದಂಭಂಗೆ ದು-
ರ್ಜನಶೀಲಂಗೆ ಶಿವೋಪಜೀವನವೃಥಾಲಾಪಂಗೆ ಚಿಃ ಕಾಕಭಾ-
ಜನಮಂ ಮಾಡುವರಲ್ಲದಚ್ಛಶಿವಭಕ್ತರ್ಗೀಶಯುಕ್ತರ್ಗೆ ಲಾಂ-
ಛನ[೨]ಧಾರರ್ಗೊಲಿದೀವರಾರೊಳರೆ ಪೇೞ್[೨] ಪಂಪಾವಿರೂಪಾಕ್ಷನೇ ೯೦

ಶಿವ ಶಿವ ಪುಣ್ಯಬಂಧುವೆ ಪುರಾತನಬಂಧುವೆ ಸರ್ವಜೀವಬಂ-
ಧುವೆ ಪರಮಾರ್ಥಬಂಧುವೆ ಸುಖಪ್ರದಬಂಧುವೆ ಬಾರನಾಥಬಂ-
ಧುವೆಯನಿಮಿತ್ತಬಂಧುವೆ ಮನೋಹರಬಂಧುವೆ ಅತ್ಯಪೂರ್ವಬಂ-
ಧುವೆ ಸಕಲೈಕ[೩] ಚೇತನಸುಬಂಧುವೆ[೩] ಬಂಧುವೆ ಹಂಪೆಯಾಳ್ದನೇ ೯೧

ಎರಡುಂಟೆಂದೆನುತಿರ್ಪ ಪಾತಕರ ಮಾತಂ ಮೀಱುವೆಂ ಮೀಱುವೆಂ
ಹರನೊರ್ವಂ ಗುರುವೆಂ[೪]ಬುದುಂ ಧರಣಿಗಂ ತಾಂ[೪] ಸಾಱುವೆಂ ಸಾಱುವೆಂ
ಪರವಾದಿಪ್ರಕರಕ್ಕೆ ತಕ್ಕೊಡೆ ವಿರೂಪಾಕ್ಷಪ್ರಸಾದತ್ವದಿಂ
ವರದೃಷ್ಟಾಂತಮನೀಗಳೀಗಳೊಲವಿಂದಂ ತೋಱುವೆಂ ತೋಱುವೆಂ ೯೨

ಜಗದೊಳಗೆಲ್ಲ ನೋಡುವೊಡಸತ್ಯಮೆ ತೀವಿ ತುಳುಂಕುತಿರ್ಪುದಂ
ಬಗೆವೊಡೆ ಭಕ್ತನೊರ್ವನದಱೊಳ್ ನೆಱೆ[೫] ಸತ್ಯಮನಾಡಲಾತನೇ
ಪಗೆಯೆನಿಸಿರ್ಪುದೇಕೆನಲಸತ್ಯಮೆ ತಾಂ ಪಿರಿದಾಗೆಯಂತದಂ
ಬಗೆಯದೆ ಸತ್ಯಮಂ ನುಡಿಯುತರ್ಚಿಸು ಮಾನವ[೮] ಹಂಪೆಯಾಳ್ದನಂ ೯೩

ಹರಿಯುಂ ಕೃಷ್ಣಾವತಾರಾಂತ್ಯ[೬]ದೊಳೆ ಶಬರನುಂ[೬] ಕಾಲನೆಚ್ಚಲ್ಲಿ ಪೋಗಲ್
ಹರಣಂ ಕೊಂಡಾಡುತಿರ್ಪರ್[೭] ಕೆಲಬರವನನಾ[೭] ವಿಷ್ಣುದೇಹಂಗಳಂ ಶಂ-
ಕರನುಟ್ಟಂ ತೊಟ್ಟನೆಂದೀ ಶರಣರೆನೆ ಕರಂ ಕಾಯ್ವರಯ್ಯೋ ವಿವೇಕಂ
ಪರಮಾಣಂ ಪುಟ್ಟದೀ ಶಾಪಹತರ ನುಡಿಯೇವಾಳ್ತೆ ಪಂಪಾಧಿನಾಥಾ ೯೪

---

೧ ಘಡಾರ್ಪ (ಪಾ) ೨-೨ ಗುಪ್ತಂಗಱಿದೀವರುಂಟೆ ಧರೆಯೊಳ್ (ಪಾ) ೩-೩ ಬಂಧುವೆ ಅನಾರತ (ಪಾ) ೪-೪ ಬಡಂಗುರಮುದಂ ನಾಂ (ಪಾ) ೫ ತಿರ್ಪುದು (ಪಾ) ೬-೬ ದೊಳಗೆ ಶಬರಂ (ಪಾ) ೭-೭ ಶಬರರವನನುಂ (ಪಾ) ೮ ಸತ್ಯವೆಂಬಾ (ಪಾ)

ಹರಿನಯನಾರ್ಚಿತಾಂಘ್ರಿಯುಗಳಂ ಹರಿ[೧] ವೇಮನಿಕಾಯ[೧] ಭೂಷಣಂ
ಹರಿಹರನೆಂದು ನಿನ್ನ ನಿಜಕೀರ್ತನೆಯಂ ಶರಣಾಳಿ ಕೂಡೆ ಡಂ-
ಗುರಿಸುತೆ ಸತ್ವಮಂ ನುಡಿಯೆ ಸೇರದು[೨] ಶಾಪಹತರ್ಗೆ ನಿಂದೆಯಂ-
ತರ ಸಲುತಿರ್ಪುದಿಂತಿವರ ಪಾಪಮಿದಚ್ಚರಿ ಹಂಪೆಯಾಳ್ದನೇ ೯೫

ಪುಸಿಯಂ ಪೇಳ್ವುದೆ ನಿಂದೆ ಸತ್ಯಮೆ ಕರಂ ಸ್ತೋತ್ರಂ ಹರಂ ಮಾಡಿತಂ[೩]
ಪುಸಿಯಲ್ಲಂತದಱಿಂದೆ ವಿಷ್ಣುನಯನಾಂಭೋಜಾರ್ಚಿತಂ ವಿಷ್ಣು[೪] ಸಂ-
ವಸನಂ[೪] ವಿಷ್ಣುಶರೀರಶೂಲಧರನಾ ವಿಷ್ಣುಪ್ರದಂ ಭಾಪು ವಿ-
ಷ್ಣುಶಿರೋವೇಷ್ಟನನಿಂತು ಸಂಸ್ತುತಿಯಿಪಂ ಪಂಪಾವಿರೂಪಾಕ್ಷನಂ ೯೬

ಕೇಳಿಲೆ ವೈಷ್ಣವಾ[೫]ದಿಗಳೆ[೫] ನಿಮ್ಮ ನೃಸಿಂಹನನಂದು ಕಾಣುತುಂ
ಕಾಳೆಗದಲ್ಲಿಯೆಮ್ಮ ಶರಭಂ ನುಡಿದೇನದನಕ್ಕಟಾ ನಿರೋ-
ಧಾಳಿಯನಿನ್ನುಮೊಂದನೆಲೆ ಪೇಳ್ವೆನೆ ದಕ್ಷನ ಯಾಗದಲ್ಲಿ ಚೀ
ಪೇಳಲದೇಕೆ ದೇವನಣುಗಂ ನಿಮಗೊಡ್ಡಿದ ಭಂಗಮೆಲ್ಲಮಂ ೯೭

ಸಡಿ ಘಡ ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ ಕ-
ಪ್ಪಡದ ಶರೀರಿಗಳ್ ತೃಣದ ಹಾಹೆಗಳಕ್ಕಟ ಮಣ್ಣ ಬೊಂಬೆಗಳ್
ಕುಡುವುವೆ ಬೇಡ ಬೇಡೊಲಿದುದೀವ[೬] ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಪೆಂಪಿನ ಹಂಪೆಯಾಳ್ದನಂ ೯೮

ಎಱಗುವೆನೆನ್ನ ಹಂಪೆಯರಸಂಗೆ ಹರಂಗೆ ಶಿವಂಗೆ ಮಿಕ್ಕಿನ-
ರ್ಗೆಱಗುವೊಡುಂಟೆ ಪಂಚಮುಖಮುಂಟೆ ಗಜಾಜಿನಮುಂಟೆ ಪತ್ತುತೋಳ್
ಕಱು[೩]ಗೊರಲುಂಟೆ ಕೆಂಜಡೆಗಳುಂಟೆ ಮರುನ್ನದಿಯುಂಟೆ ಭಾಳದೊಳ್
ಮಿಱುಗುವ ನೇತ್ರಮುಂಟೆ ಶಶಿಯುಂಟೆ ವೃಷಧ್ವಜಮುಂಟೆ ದೇವರೊಳ್ ೯೯

ಜಯಜಯ ಪುಣ್ಯಮಾರ್ಗಮಿದು ಸಾತ್ವಿಕಲಕ್ಷಣಮಿಂತಿದಾದ್ಯರ-
ನ್ವಯ[೭]ಮಿದನೂನಭಕ್ತಿರಸಪೂರಮಿದುತ್ತಮಶೀಲಭಕ್ತರಾ-
ಶ್ರಯಮಿದು ತಪ್ಪದೆಂದು ಶರಣರ್ ಮಿಗೆ ಬಣ್ಣಿಸೆ ಪೇಳ್ದನಾಹ ಹಂ-
ಪೆಯ ಹರಿದೇವನೀ[೮]ಶತಕಮಂ ಸಕಲೇಷ್ಟಫಲಪ್ರದಾತೃವಂ[೮] ೧೦೦

**ಸಂಪೂರ್ಣಂ**

---

೧-೧ ದೇಹನಿಳಾಯ ಪಾ ೨ ದ (ಪಾ) ೩ ಗೆಯ್ವುದಂ (ಪಾ) ೪-೪ ವಾ|ಸಸನಾ ಪಾ ೫-೫ ನೆಗಳ್ದ ೬ ದುದನೀವ (ಪಾ) ೭ ಸ್ಪಯ (ತಾ) ೮-೮ ನೊಪ್ಪಿರೆ ಪುರಾತನ ನೂತನ ಸಚ್ಚರಿತ್ರಮಂ (ತಾ)

ತಾಳೆವೋಲೆಯ ಪ್ರತಿಯಲ್ಲಿ ೯೯ನೆಯ ಪದ್ಯವಾದ ಮೇಲೆ ಈ ಕೆಳಗಣ ಮೂರು ಪದ್ಯಗಳು ದೊರೆಯುತ್ತವೆ:

ಆಹಾ ಕಷ್ಟಮನೇನ ಬಣ್ಣಿಪೆನದಂ ಸಂಸಾರದಾಯಾಸಮಂ
ಬಾಹೋಗೆಂಬರನಾಸೆಮಾಡಿ ಪೆಱರಂ ಕೊಂಡಾಡಿ ಬೇಸತ್ತೆನೀ
ದೇಹಕ್ಕೋಸ್ಕರ ದೈನ್ಯಬಟ್ಟೆನಕಟಾ ನೀನಲ್ಲದನ್ಯತ್ರರಂ
ದೇಹೀ ಎಂಬುದ ಮಾಣಿಸೆನ್ನನುಳುಹಾ ಪಂಪಾಪುರಾಧೀಶ್ವರಾ ೧೦೧

ಮೃಡ ನೀಂ ಕಲ್ಲೊಳಗೇಕೆ ಪೊಕ್ಕುಸುರದಿಂತಿರ್ದಪ್ಪೆ ಭಕ್ತರ್ಗೆ ನೀಂ
ಕೊಡೆನಿನ್ನಿಲ್ಲೆನೆ ಸಾಲದೇನಡಗಲೇಕಿಲ್ಲೆಂಬುದಂ ಬಲ್ಲೆವಿ-
ಟ್ಟೊಡಲಿಂಗಿಲ್ಲದೆ ಮೇಣ್ ಪರಾನ್ನದುಣಿಸಿಂ ದಾರಿದ್ರ ನೀನಾವಗಂ
ಬಡಪಂ ಬಲ್ಲೆವು ಬೇಡೆವಂಜದಿರೆಲೇ ಪಂಪಾಪುರಾಧೀಶ್ವರಾ ೧೦೨

ವಾದಿನ್ನೇಕಬ್ಧಿಯೊಳ್ ಪುಟ್ಟಿದ ಘನಗರಳಂ ಬೆಂಕೊಳಲ್ ಪಕ್ಕಿಗೊಂಡೆ-
ಲ್ಲಾ ದೇವರ್ ಕಾವರಿಲ್ಲೆಂದಭವ ಭವತು ಪಾದಾಬ್ಜದೊಳ್ ಬೀಳೆ ನಂಜುಂ-
ಡಾದಂ ವೈದೋಱ ಕೂರ್ಪಿಂ ಸರಸತಿ ಮುಂತಾದರಿಟ್ಟೋಲೆಗಾದಾ-
ಮಾದೇವಂ ನೀನೆ ಮತ್ತಾರ್ ತ್ರಿಭುವನವಿಭು ಪಂಪಾವಿರೂಪಾಕ್ಷಲಿಂಗಾ ೧೦೩

---

# ಕಠಿಣ ಶಬ್ದಗಳ ಕೋಶ

## ರಕ್ಷಾಶತಕ



ವೃತ್ತ :

೧ ಚಂಚತ್-ಅಲುಗಾಡುವ, ಜೋತಾಡುವ
ಉತ್ತಂಸ-ಮುಂದಲೆಯಮೇಲಿನಮಾಲೆ,
—ಆಭರಣ

೨ ಗುಲ್ಮ-ಗಿಡಗಂಟೆ
ಭೂರಿ-ದೊಡ್ಡ
ಭೂಜ-ಮರ

೩ ಮಾಸು-ಜರಾಯು, ಗರ್ಭದಲ್ಲಿ ಕೂಸನ್ನು
ಸುತ್ತಿಕೊಂಡಿರುವ ಚೀಲ
ಪುರೀಷ-ಮಲ
ಕೆತ್ತಿರು-(ಕೆತ್ತು + ಇರು)-ಮುಸುಕಿರು
(ಕೆತ್ತು-ಮುಸುಕಿ) (ಧಾತು: ಕಿಱ್)
ಉಜ್ಜುಗ (ಸಂ : ಉದ್ಯೋಗ)-ಕೆಲಸ

೪ ಶ್ಲೇಷ್ಮ-ಕಫ
ತೋಮು-ಒದ್ದೆಯಾಗಿ
ಬಧಿರ-ಕಿವುಡ
ಭೋಜ್ಯ-ಆಹಾರ; ಭೋಗವಸ್ತು
ಪಕ್ಕಾಗು-ಒಳಗಾಗು, ಅನುಭವಿಸು

೫ ವಿಕಳತೆ-ಮನಸ್ಸಿನ ಚಂಚಲತೆ, ದುಃಖ,
ದುಮ್ಮಾನ
ಹೀಹಂದಿ-ಹೇಯ (ಹೀನ)ವಾದ ಹಂದಿ
ಎಣೆ-ಸರಿ, ಸಮಾನ

೫ ಬೇಳಾಗು-ಮರುಳಾಗು, ಹುಚ್ಚನಾಗು
ಬಱುದೊಱೆ-ಬತ್ತಿದ ಹೊಳೆ
ಬಿಗುರ್ತೆಂ-ಭಯಗೊಂಡೆನು

೬ ಸ್ತೋಮ-ಸಮೂಹ
ಕಳ(ಱ)ಲ್ದು-ಬಿದ್ದು, ಜಾರಿ, ಸಿಡಿಲಾಗಿ
ರಾಗ-ಪ್ರೀತಿ ಸಿಟ್ಟು ಮುಂತಾದ
ಮನೋವಿಕಾರ

೭. ಏಪೊಳ್ತು(ಬ್ತು)ಂ-ಯಾವ ಹೊತ್ತಿ
ಗಾದರೂ, ಯಾವಾಗಲೂ

ವೃತ್ತ :

೮ ಕೆಮ್ಮನೆ-ಸುಮ್ಮನೆ, ಕಾರಣವಿಲ್ಲದೆ
ಕ್ಷೇತ್ರ-ಹೊಲ
ನಿಕಾಯ-ಸಮೂಹ
ಆಕಲ್ಪ-ಆಭರಣ
ಕರಂ-ಚೆನ್ನಾಗಿ, ಬಹಳವಾಗಿ
ಕೂರ್ಮೆ-ಪ್ರೀತಿ

೯ ದೇಹೋಹಂ-ಶರೀರವೇ ನಾನು
(ಎಂಬ ಭಾವನೆ)
ಉರ್ಬುವ-ಹೆಚ್ಚಾಗುವ
ವ್ಯೂಹ-ಸಮೂಹ
ಮಿಥ್ಯಾ-ನಿಜವಲ್ಲದುದು, ಸುಳ್ಳಾದುದು
ಒತ್ತಂಬ-ಒತ್ತರ, ಪ್ರಾಬಲ್ಯ

೧೦ ಪರಿ-ಕತ್ತರಿಸು, ಹರಿದೊಗೆ
ಉಱದೆ-ನಿಲ್ಲದೆ, ಹಿಂಜರಿಯದೆ
(ಧಾತು: ಉಱ್-ನಿಲ್ಲು)

೧೦ ಅಱಿಯಟ್ಟು-ಹಿಂದಕ್ಕೆ ಓಡಿಸು,
(ಅಱಿ (ರೆ)-ಹಿನ್ನೆಲೆ)
ಮಾತಂಗ-ಆನೆ
ಆರೋಹಕ-ಕುದುರೆ ಆನೆ ಮೊದಲಾದು
ವನ್ನು ಹತ್ತುವುದರಲ್ಲಿ ಚತುರನು
ಸಯ್ತಿಡು-ಸುಮ್ಮನಿರಿಸು

೧೧ ಬಲ್ಪು-ಶಕ್ತಿ, ಪರಾಕ್ರಮ
ತಗೆರ್ತು-ತಗ್ಗಿಸು, ಶಕ್ತಿಗುಂದಿಸು

೧೨ ಸುಗುರ್-ಹತ್ತಿಕ್ಕು, ಹಿಂಡು, ಪುಡಿಮಾಡು
ಹಿಸುಕು

೧೩ ಬೆತ್ತ-ಪೆತ್ತ, ಹೊಂದಿದ
ಪಾಂಗು-ರೀತಿ, ತರ
ಪಳಿ-ನಿಂದಿಸು

೧೪ ಅಳ್ಕಱ್-ಪ್ರೀತಿ
ತೀವು-ತುಂಬಿಕೊಂಡಿರು

**ವೃತ್ತ :**

೧೫ ಎಂಟು-ಸೊಕ್ಕು
ನಿಮಿರ್-ಹರಡು, ಪಸರಿಸು
ಆತ್ಮೋದ್ಭವ-ಕಾಮ
ಮೂಲ-ಬೇರು
ಸಂತಂ ಮಾಡು-ಶಾಂತ-ಸಮಾಧಾನ ಮಾಡು

೧೬ ಉದ್ಧತ= 'ಉದ್ಧಟ', ಸೊಕ್ಕಿನ
ಓರಂತೆ-ಒಂದೇ ರೀತಿಯಾಗಿ
ಒಡತಣ-(ಒಡೆಯುತನ) ಆಳಿಕೆ, ಆವರಿಸಿಕೊಂಡಿರುವಿಕೆ

೧೭ ಭೂಷಣ-ಒಡವೆ, ಅಲಂಕಾರ
ವಿತತಿ-ಸಮೂಹ
ಉಳ್ತು-(ಉತ್ತು)-ಹೊಲಮಾಡಿ (ಧಾ: ಉಱ್)

೧೮ ತೆತ್ತುಂ-ಸುಂಕ, ಕರ, ಬಡ್ಡಿ ಮೊದಲಾದ ಹಣವನ್ನು ಕೊಟ್ಟು (ಧಾ-ತಿಱ್, ತೆಱು)
ಸುಗಿ-ಅಂಜು, ಅಳಕು
ಅಲಸು-ಬೇಸರಪಡು

೧೯ ವಿಂಧ್ಯವಿತಾನ-ವಿಂಧ್ಯಮೊದಲಾದ ಪರ್ವತಗಳ ಸಾಲು
ಕಲ್ಪೋರ್ವೀಜ-ಕಲ್ಪವೃಕ್ಷ

೨೦ ಪಲ್ಗಿರಿ-ಹಲ್ಲುಕಿರಿ

೨೧ ವಿಪುಳತೆ-ಬಹಳ (ಕೆಲಸ)
ಕಾರ್ಪಣ್ಯವಕ್ತ್ರ-ದೈನ್ಯ-, ಬಡತನ ಸೂಚಿಸುವ ಮುಖ (ವುಳ್ಳವ)
ತನುಗಾತ್ರಂ-ಕೃಶವಾದ ದೇಹ (ವುಳ್ಳವನು)
ತುಷ-ಧಾನ್ಯದ ಮೇಲ್ಭಾಗ; ತವುಡು
ಮಾತ್ರ-ಗಾತ್ರ, ಪರಿಮಾಣ
ಬೇಳ್ಪ-ಬೇಡುವ

೨೨ ನಿರರ್ಥಾರ್ಥನಿಮಿತ್ತಂ-ಹುರುಳಿಲ್ಲದ ಧನ ಮೊದಲಾದವುಗಳ ಸಲುವಾಗಿ

೨೩ ಉರವಣಿಸು-ಪ್ರಜ್ವಲಿಸು

**ವೃತ್ತ :**

೨೪ ನವೆ-ಸಣ್ಣಾಗು
ಸೆಡೆ-ಬೆದರು
ತವಿಲಾಗು-ಕೃಶವಾಗು

೨೫ ಮುಳ್ಗು (ಱು)-ಸಾಯುವಂತಾಗು, ಮುಸಕಾಗು, ಮಾಸು
ಮಾಱುವೋಗು-ಮಾರಿಕೊಳ್ಳು
ಮುಯ್ಯಾನು-(೧) ಹೆಗಲು ಹಚ್ಚು, (೨) ಶಿಕ್ಷೆಹೊಂದು
ಕಿರ್ಗಯ್ಯಾಗು-ಕೈಕಿರಿದು ಆಗು ಕೈ (ಮುರಿದವನಂತೆ) ಆಗು

೨೬ ಉರಗ-ಹಾವು
ಆಸ್ಯ-ಮುಖ
ಆಲಗ್ನ-ಸೇರಿಕೊಂಡ
ಹರಿ-ಕಪ್ಪೆ
ದ್ವಿರದ-ಆನೆ
ಪೋಲ್-ಅಂತೆ, ಹಾಗೆ
ಪಿಂಗಿಸು-ಕಳೆ

೨೭ ಆರ್ತಿ-ಆಸೆ, ದುಃಖ
ಪೊಂಗಿಸು-ಹೆಚ್ಚಿಸು
ಕೈಗುಂದಿಸು-ಕಡಿಮೆಮಾಡು
ಪಥ್ಯ-ಹಿತವಾದ ಮಾತು
ವಕ್ರಿಸು-ಸೆಟೆದುಕೊಳ್ಳು

೨೮ ದ್ವಿರದ-ಆನೆ
ಪತಂಗ-ಮಿಂಚು-ಹುಳ; ಹೊನ್ನೆಯ ಹುಳ
ವಿದ್ರೂಪಿ-ರೂಪುಗೆಟ್ಟವ

೨೯ ತಸ್ಕರ-ಕಳ್ಳ
ಕಂಟಕ-ಹಗೆ, ಸಂಕಟ, ಕಷ್ಟ(ಇತ್ಯಾದಿ)

೩೦ ಸೈತು-ಸುಮ್ಮನೆ, ಚೆನ್ನಾಗಿ
ವೈವಾಹ-ಮದುವೆ
ತೊಟ್ಟನೆ-ತಟ್ಟನೆ, ಒಮ್ಮೆಲೆ
ಬೇಳಪ್ಪ-ಮರುಳಾಗುವ

೩೧ ನೀರಕ್ಕರ-ನೀರಿನ ಮೇಲೆ ಬರೆದ ಬರೆಹ (ಸ್ಥಿರವಲ್ಲದುದು)

**ವೃತ್ತ :**

೩೧ ವಾಯು-ಹುಸಿ
ಮರೀಚೀಜಲ-ಬಿಸಿಲ್ಗುದುರೆ
ಅಚಿರ-ಅಸ್ಥಿರ

೩೨ ಎರವು-ಕಡವಾಗಿ ತಂದುದು; ಅಲ್ಪಕಾಲ ಬಾಳುವಂತಹದು
ಪುದು-ಎರಡನೆಯವರ ಕೂಡ ಹಂಚಿಕೊಳ್ಳುವಂತಹದು
ಔಪಾಧಿಕರ್-ತಮ್ಮ ತಮ್ಮ ಹಿತವನ್ನು ಸಾಧಿಸುವವರು

೩೩ ಶೈವಾಲ-ಹಾವಸೆ
ಮುಕುರ-ಕನ್ನಡಿ

೩೪ ಪೋರ್-ಹೋರಾಡು
ಅಭ್ರಾಳಿ-ಮೇಘ ಸಮೂಹ
ದುವಾಳ್-ಪ್ರಾಬಲ್ಯ

೩೫ ಪೊಳ್ತು-ಹೊತ್ತು, ಕಾಲ

೩೬ ಎರೆ-ಬೇಡು, ಯಾಚಿಸು

೩೭ ಪೊರ್ದು-ಹೊಂದು
ಅಣಂ-ಸ್ವಲ್ಪಾದರೂ, ಏನಾದರೂ
ತಪೆ-ಬಹಳವಾಗಿ, ಚೆನ್ನಾಗಿ
ಕಾವವರಿಂ-ಕಾವವರ್ (ಕಾಯುವವರು)+ಇಂ(-ಇನ್ನೂ)

೩೮ ಎಂತಕ್ಕೆ-ಹೇಗಾದರೂ
ಆಱದೆ-ಶಕ್ತನಾಗದೆ
ಒಲೆ-ಅತ್ತಿತ್ತ ಒಲಿದಾಡಿಸು
ಬಳ್ವು-ಬಾಳಿ

೩೯ ಒಱಪು-ಕಾಂತಿ, ಸೌಂದರ್ಯ
ಓಜೆ-ರಕ್ತಿ

೪೦ ಕೆತ್ತು-ಮುಚ್ಚಿ(ಬಲಗುಂದಿ)(ಧಾ: ಕಿಱುರ್)
ಪೆಗುರ್ಗರ್-ಹೆಚ್ಚಿನ ಉಬ್ಬಸ
ಅಂಟಂಟಿ-ಹಿಡಿದು ನೋಡಿ
ಪವಣು-ಹವಣು (ಸಂ: ಪ್ರಮಾಣ)

೪೧ ನಾನೇವೆಂ-ನಾನೇನು ಮಾಡಲಿ
ತನೂಜಾಳಿ (ತನೂಜ+ಆಳಿ)-ಮಕ್ಕಳ ಸಮೂಹ
ಕಾಷ್ಠರೂಪಿಂ-ಕಟ್ಟಿಗೆಯಂತೆ

**ವೃತ್ತ :**

೪೨ ನಿಷೇಧ-ಮಾಡಬಾರದಂತಹ ಕೃತಿಗಳು
ವ್ರಾತ-ಸಮೂಹ
ಹೇಯ-ನಿಂದ್ಯವಾದುದು
ನಿರೋಧ-ಸಂಕಟ
ಸ್ತೋಮ-ಸಮೂಹ
ಅಲಸು-ಬೇಸರಪಡು
ಅದಿರು-ಹೆದರು, ನಡುಗು
ಅನುಗೆಟ್ಟಿಂ-ಗತಿಗೆಟ್ಟಿನು

೪೩ ಅನೂನ-ಕೊರತೆಯಿಲ್ಲದ, ಊನವಾಗದ
ಅಘಟಿತಘಟಿತ-ಮೊದಲೆಂದೂ ಸಂಭವಿಸದಂತಹ (ಸಂಗತಿ)

೪೪ ಶರಣ್-ಆಶ್ರಯಸ್ಥಾನ
ಪರರ್-ಹೆಚ್ಚಿನವರು

೪೫ ಬುಧದ್ವೇಷಿ-ರಕ್ಕಸ, ತಿಳಿದವರನ್ನು ತಿರಸ್ಕರಿಸುವ
ಪರ-ಎರಡನೆಯವ, ಅನ್ಯ, ಬೇಡಾದವ

೪೬ ಆತುರ- (ವಿಷಯಾದಿಗಳಲ್ಲಿ) ಆಸೆಯುಳ್ಳವ

೪೭ ದೋಷಾರ್ತಿ-ದೋಷದಿಂದ ದುಃಖಪಡುವವ
ಅಳಿಪ-ಆಸೆಮಾಡುವವ
ಗಳಪ-ಹರಟೆ ಕೊಚ್ಚುವವ
ಚಾರ್ವಾಕ-ದೇವರಲ್ಲಿ ನಂಬಿಗೆ ಇಲ್ಲದವ

೪೯ ವಿಮಾನ-ಮಾನಗೇಡಿ, ಅಳತೆ ಇಲ್ಲದದ
ನತಕಲ್ಪೋರ್ವೀಜ-ಶರಣರಿಗೆ ಬೇಡಿದುದನ್ನು ಕಲ್ಪವೃಕ್ಷದಂತೆ ಕೊಡುವಂತಹನು

೫೦ ಅನನ್ಯ-ಬಹಳ ಬೇಕಾದವನು

೫೧ ಖಳಜನಸಲಿಲಾವರ್ತ-ಕೆಟ್ಟಜನರಲ್ಲಿಯೆ ತಿರುಗಣಿ ಮಡದಲ್ಲಿ ತಿರುಗುವಂತೆ ತಿರುಗುವವ
ಗರ್ತ-ಆಳವಾದ ತಗ್ಗು

೫೨ ಮಸಕ-ಪ್ರಾಬಲ್ಯ, ಆವೇಶ

೫೬ ಪುದುವಾಳ್-ಕೂಡಿಕೊಂಡಿರುವ ಬಾಳುವೆ

**ವೃತ್ತ :**

೫೭ ಸಾಂಗತ್ಯ-ಸಂಗ, ಕೂಡುವಿಕೆ

೫೮ ದೋರ್ಯುಗ- (ದೋಸ್ + ಯುಗ) ಬಾಹುಯುಗ, ರಟ್ಟೆಗಳು

೫೯ ಆರ್ತ-ಉತ್ಸುಕತೆ, ಆತುರತೆ
ಸೈಗೆಡೆದು-ನೆಟ್ಟಗೆ ನಮಸ್ಕಾರ ಮಾಡಿ
ತವನಿಧಿ-ಅಕ್ಷಯ ಸಂಪತ್ತು
ಕಾಪಿನಾಳ್-ರಕ್ಷಕ

೬೧ ಭೂತಿ-ವಿಭೂತಿ

೬೩ ವಾಮ-ಚೆಲ್ವಾದ
ವಿಕಾಸಾಬ್ಜ-ಅರಳಿದ ಕಮಲಗಳುಳ್ಳ
ನಿಷ್ಪಂದ-ಅಲುಗಾಡದ, ಕುಗ್ಗದ

೬೪ ಪ್ರಸೂನ-ಹೂ
ಪ್ರತಾನ-ಸಮೂಹ, ವಿಸ್ತಾರ
ದ್ಯುತಿ-ಬೆಳಕು, ಕಾಂತಿ

೬೫ ಮರಲ್ದು-ಅರಳಿ, ಹಿಗ್ಗಿ
ಮುನಿ-ಸಿಟ್ಟಾಗು
ತೊನೆ-ತೂಗಾಡು
ತವಕಿಸು-ಆತುರನಾಗು, ಆಶೆಪಡು
ಜಿನುಗು-ಗೊಣಗುಟ್ಟು

೬೭ ಸ್ಪಂದ-ಹಾರುವಿಕೆ, ಅಳ್ಳಿರಿಯುವಿಕೆ

೬೮ ಇರವಂ-ಇರುವಿಕೆಯನ್ನು, ಸ್ಥಿತಿಯನ್ನು

೭೦ ಅಸವಸ-ಅವಸರ, ತೀವ್ರತೆ
ಕೂರ್ಪರ್-ಪ್ರೇಮಿಗಳು, ಪ್ರಿಯರು
ದಾಕ್ಷಿಣ್ಯ-'ಬಿಡಯ', ನಮ್ರತೆ

೭೧ ಕೀಱದೆ-(೧) ಚೀರದೆ, (೨) ಸುಡದೆ
ತಾಱದೆ-ಒಣಗದೆ

೭೨ ಸೂಡು-ಧರಿಸು
ಕೋಡು-ನಡುಗು

೭೫ ಬೈತೊಡಂ-ಮುಚ್ಚಿಟ್ಟರೂ
ಒಂದಂದಂ-ಒಂದೇ ರೀತಿ

೭೮ ಒಚ್ಚತಂಗೊಡು-(ಸರಿಯಾಗಿ)ಬೆರೆ, ಕೂಡಿಕೊಳ್ಳು

೮೧ ಪೆಂಪು-ಹೆಚ್ಚಳ, ಹಿರಿಯತನ
ಸುಧಾ-ಅಮೃತ

**ವೃತ್ತ :**

೮೨ ಪರಮಾರ್ಥ-ಶ್ರೇಷ್ಠವಾದ ಸತ್ಯ
ಸಮ್ಯಕ್-ಸರಿಯಾದ
ತಾಮರಸೋದ್ಭೂತ-ಬ್ರಹ್ಮ [ತಾಮರಸ (-ಕಮಲ) + ಉದ್ಭೂತ[-ಹುಟ್ಟಿದವ]
ಶಕ್ರ-ಇಂದ್ರ
ಅಸುರರಿಪು-ವಿಷ್ಣು [-ರಾಕ್ಷಸರ ವೈರಿ]
ದಲ್-ನಿಜವಾಗಿ

೮೩ ಬಿಸ-ವಿಷ
ಅಸಮ-[ತನಗೆ ಮತ್ತಾರೂ] ಸರಿಯಿಲ್ಲದಂತಹನು
ಅನಘ-ಪಾಪರಹಿತ

೮೪ ರಸಾ-ಪೃಥ್ವಿ
ವ್ಯೋಮ-ಆಕಾಶ
ಅಭಿಜ್ಞಾನ-ಸರಿಯಾದ ತಿಳಿವಳಿಕೆ

೮೫ ಅರ್ಕ-ಸೂರ್ಯ
ಅಜರಂ-ಮುಪ್ಪಿಲ್ಲದವನು
ಪರಂಧಾಮ-ಶ್ರೇಷ್ಠವಾದ ಆಶ್ರಯಸ್ಥಾನ

೮೬ ಪುಣ್ಯಪಾಪಪ್ರದೂರಂ-ಪುಣ್ಯಪಾಪಗಳಿಗೆ ಸಂಬಂಧವಿಲ್ಲದವನು
ಕಾಲಘ್ನಂ-ಕಾಲ[ಯಮ]ನನ್ನು ಸಂಹರಿಸಿದವನು
ವಿಪಜ್ಜಾಲ-ಕಷ್ಟಪರಂಪರೆ

೮೭ ಭೋಗೀಂದ್ರಭೂಷ-(ಶ್ರೇಷ್ಠ) ಹಾವುಗಳನ್ನು ಆಭರಣ ಮಾಡಿಕೊಂಡಂತಹನು

೮೮ ಅಧ್ವರ-ಯಾಗ

೯೧ ಆಶ್ರವೆ [ಸಂ. ಆಶ್ರವ]-ದುಃಖ; ತಪ್ಪು

೯೨ ‡ಕೂರ್ಮರೋಮ-ಆಮೆಯ ಕೂದಲು
‡ಶಶವಿಷಾಣ-ಮೊಲದ ಕೋಡು
‡ವಿಯತ್‌ಪುಷ್ಪ-ಆಕಾಶದ ಹೂ
‡ ಇವೆಲ್ಲ ಅಸಂಭವ

೯೯ ಕರ್ತಾರ-ಹುಟ್ಟಿಸುವವ
ಭರ್ತಾರ-ಪೋಷಿಸುವವ
ಹರ್ತಾರ-ಸಂಹರಿಸುವವ

## ಪಂಪಾಶತಕ

**ವೃತ್ತ :**

೧ ಅನಿಲ-ಗಾಳಿ
ಸುತ್ರಾಮ-ಇಂದ್ರ
ತ್ರಿದಶ-ದೇವತೆಗಳು
ವ್ರಜ-ಸಮೂಹ
೨ ಪಥ-ಹಾದಿ
ಮನೋಗಳಿತತರಾಬ್ಧಿ-ಮನಸ್ಸೆಂಬ (ಕುಂದಿದ) ಸಮುದ್ರ
೩ ತೊದಳ್-ತೊದಲು ನುಡಿ
೪ ಅಣಂ-ಎಳ್ಳಷ್ಟೂ, ಏನೂ ('ಇಲ್ಲ' ಎಂಬ ಅರ್ಥದ ಶಬ್ದದೊಡನೆ ಇದರ ಪ್ರಯೋಗ)
ಕೆಂಕರಿಸು-ಕೆಂಗಲಿಸಿ ಕೆಂಪಾಗು
೫ ಅಮರ್ದಪ್ಪು-(ಅಮರ್ದು + ಅಪ್ಪು) ಪ್ರೀತಿಯಿಂದ ಅಪ್ಪಿಕೊಳ್ಳು
೬ ತೆರೆಮುಸಗು-ತೆರೆಯಂತೆ ಆವರಿಸು
ತರಂಗಿಣಿ-ನದಿ
ಉಬ್ಬರಂಬರಿ-ತುಂಬಿ ಹರಿ(ನದಿಗಳಂತೆ)
೭ ಇಡಿ-ಕೂಡಿಕೊಳ್ಳು, ಬೆರೆತು ಹೋಗು
೯ ಸ್ವೈಪು-ಪುಣ್ಯ
೧೦ ಪದೆ-ಇಚ್ಛಿಸು, ಆಶೆಮಾಡು ತವಕಿಸು
೧೧ ಇರ್ಕೆಮ ( ಇರ್ಕೆ + ಎಮ )- ತಪ್ಪದೆ ಇರಲಿ
೧೨ ಉದಿತ-ಕಟ್ಟಲ್ಪಟ್ಟ
೧೩ ನಡೆ-ದಿಟ್ಟಿಸಿ
೧೭ ಶಾರದ ಶಶಿ-ಶರತ್ಕಾಲದ ಚಂದ್ರ
೨೦ ಪಡು-ಮಲಗು
ರುದ್ರಭೂಮಿ-ಸ್ಮಶಾನ
ಉತ್ತಮಾಂಗ-ತಲೆ
ಕುಂಜರ-ಆನೆ
೨೧ ಮು[illegible]ವಡು-ಎಚ್ಚರದಪ್ಪು, ಮೈಮರೆ
೨೩ ಮಖಾರಿ-ಯಜ್ಞಕ್ಕೆವೈರಿ (ಶಿವನ ಹೆಸರು)
೨೫ ಆಭೀಳ-ಭಯಂಕರವಾದ
೩೦ ವಿರಿಂಚಿ-ಬ್ರಹ್ಮ
ಉಪೇಂದ್ರ-ಕೃಷ್ಣ, ವಿಷ್ಣು

**ವೃತ್ತ :**

೩೧ ವಿಜಯ-ಅರ್ಜುನ
ಶಿರೋವ್ರಜ-ರುಂಡಮಾಲೆ
೩೩ ರಾಜೀವ-ಕಮಲ
ಸಪ್ತಾಶ್ವ-ಸೂರ್ಯ
ಅಜಿನ-ಚರ್ಮ
೩೪ ಕಾಪಾಲಿ ( ಬ್ರಹ್ಮನ ಕಪಾಲವನ್ನು ಕೈಯಲ್ಲಿ ಹಿಡಿದುಕೊಂಡ) ಶಿವನು
೩೮ ನಿಟಿಲ-ಹಣೆಗಣ್ಣು. ವಾಸವ-ಇಂದ್ರ
೩೯ ಅಳ್ಕಮೆ ಸುಡು-ಪೂರ್ಣವಾಗಿ ಭಸ್ಮವಾಗುವಂತೆ ಸುಡು
೪೧ ಪೊಡರ್ಪು-ಶಕ್ತಿ, ಪರಾಕ್ರಮ
೪೨ ಎಳ್ತರೆ-ಹೆಚ್ಚಳ
೪೬ ಹರವರಿ-ಪ್ರಕಟವಾಗಿರುವುದು
೪೭ ಸುಟ್ಟಿಸು-ಬೆರಳಿನಿಂದ ತೋರಿಸು
೪೮ ಸಂಸೃಷ್ಟಿ-ಸಂಸಾರ, ಜಗತ್ತು
೪೯ ಅರಿದು-ಅಶಕ್ಯವಾದುದು
೫೨ ಸುಮನಚರಿತ-ನಿರ್ಮಲವಾದ ನಡತೆ
೫೪ ಆವರ್ತದಿಂ-ತಿರತಿರುಗಿ, ಮೇಲಿಂದ ಮೇಲೆ, ಯಾವಾಗಲೂ
ಬೆಳ್ವೊಲ-ಬೆಳೆದ ಹೊಲ
೫೬ ಕಾರ್ಪಣ್ಯ-ಬಡತನ, ದೈನ್ಯತೆ
೫೮ ಸುಭಗ-ಸೊಬಗುಳ್ಳ
೬೨ ಕೂಟಕೂಳದೈವ-ಅಸಂಖ್ಯ ದೇವತೆಗಳು
ಪೂಣ್ಗೊಳ್-ಪ್ರತಿಜ್ಞೆಮಾಡು
೬೬ ಸೀರೆ-ಬಟ್ಟೆ
೬೭ ಜೂಳಿ- (ಪಾತ್ರೆಯ) ಸೊಂಡಿಯಂತಹ ಬಾಯಿ
೭೫ ಮೂಗ-ಮೂಕ
ಪಂಗುಳ-ಕೈಕಾಲು ಕಳೆದುಕೊಂಡವ
೭೬ ಆರು-ದೊಡ್ಡ ದನಿಯಿಂದ ಒದರು
ಪಾರು-ಆಸೆಮಾಡು
೮೦ ದ್ಯುನದಿ-ಸುರನದಿ, ದೇವಗಂಗೆ

ವೃತ್ತ :

೮೩ ಅಹರ್ನಿಶಂ-ಹಗುಲುರಾತ್ರಿ
ಯಾವಾಗಲೂ

೮೫ ತೆಱಪು-ಸಮಯ

೮೬ ಆಖಂಡಲ-ಇಂದ್ರ

೮೮ ಹಸಾದ-ಪ್ರಸಾದ
ಝುಂಕಿಸು-ಬೆದರಿಸು

೯೦ ಗಾವಿಲ-ಎಗ್ಗ, ಗಾಂಪ
ಕಾಕಭಾಜನ-ಕಾಗೆಯ ಪಾಲು, ಹಾಳು

೯೪ ಕಾಯ್-ಸಿಟ್ಟಾಗು
ಅಣಂ-ಎಳ್ಳಷ್ಟೂ

ವೃತ್ತ:

ಏವಾಳ್ತೆ-ಏನು ಉಪಯೋಗ ?

೯೫ ಹರಿಹರ-ಹರಿ ( =ನೃಸಿಂಹ) ಯನ್ನು
ಸಂಹರಿಸಿದವನು
ಸಲುತಿರ್ಪುದು-ನಡೆಯುತ್ತಿರುವುದು

೯೬ ವಿಷ್ಣುಶಿರೋವೇಷ್ಟನಂ-ವಿಷ್ಣುವಿನ ತಲೆ
ಯಲ್ಲಿ (ಲಿಂಗರೂಪದಿಂದ) ಕುಳಿತಂತ
ಹನು

೯೭ ಹಾಹೆ-ಪಾಪೆ, ಗೊಂಬೆ

೯೮ ಅನ್ವಯ-ಹಾದಿ, ಮಾರ್ಗ



ಧಾರವಾಡ

# ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ

# ಪ್ರಕಟನೆ

## ಬಸವಣ್ಣನವರ ಷಟ್‌ಸ್ಥಳದ ವಚನಗ್ರಂಥದ ಬಗೆಗೆ

## ವಿದ್ವಾಂಸರ ಅಭಿಪ್ರಾಯ

—◆—

"ಬಸವಣ್ಣನವರ ವಚನಗಳ ಶುದ್ಧವೂ ಅಧಿಕೃತವೂ ಆದ ಸಂಸ್ಕರಣದ ಪ್ರಕಟಣಕಾರ್ಯವನ್ನು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಕೈಕೊಂಡು ಅನೇಕ ವರ್ಷಗಳಾಗಿದ್ದುವು. ಓಲೆಯ, ಅಚ್ಚಿನ, ಕೈಬರೆಹದ ಪ್ರತಿಗಳನ್ನು ಸಿಕ್ಕಷ್ಟು ಕಲೆಹಾಕಿ, ವರ್ಗೀಕರಿಸಿ, ಪ್ರತಿಯೊಂದು ಮಾತೃಕೆಯನ್ನೂ ಲಕ್ಷ್ಯಪೂರ್ವಕವಾಗಿ ಪರಾಮರ್ಶಿಸಿ, ಪಾಠಾಂತರಗಳನ್ನು ಗುರುತಿಸಿ ಅಚ್ಚಿಗೆ ಕರಡನ್ನು ಸಿದ್ಧಮಾಡುವಾಗ ಸಹಜವಾಗಿ ದೀರ್ಘವಾದ ಕಾಲಾವಧಿ ಬೇಕಾಗುತ್ತದೆ. ಈ ದೀರ್ಘಕಾಲದಲ್ಲಿ ತಮಗೆ ದೊರೆತ ಎಲ್ಲ ಪ್ರತಿಗಳನ್ನೂ ಓದಿನೋಡಿ ವಚನಗಳ ಶುದ್ಧವಾದ ಪಾಠವನ್ನು ಗುರುತಿಸಿ ವಿದ್ವತ್ಪೂರ್ಣವಾದ ಪ್ರಸ್ತಾವನೆಯೊಡನೆ ವಚನಗಳನ್ನು ಹೀಗೆ ಪ್ರಕಟಪಡಿಸಿರುವುದು ಸ್ತೋತ್ರಾರ್ಹವಾದ ಕಾರ್ಯ.

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಬಸವಣ್ಣನವರ ವಚನಗಳ ಎರಡು ಸಂಸ್ಕರಣವನ್ನು ಪ್ರಕಟಿಸುವವರಾಗಿದ್ದಾರೆ. ಈಗ ಪ್ರಕಟವಾಗಿರುವುದು ಸಾಮಾನ್ಯ ಸಂಸ್ಕರಣ, ಇನ್ನೊಂದು ಗ್ರಂಥಾಲಯ ಸಂಸ್ಕರಣ. ಈ ಎರಡನೆಯದರಲ್ಲಿ ಸಾಮಾನ್ಯ ಸಂಸ್ಕರಣದಲ್ಲಿರುವ ವಿಷಯಗಳೆಲ್ಲವೂ ಇರುವುದರ ಜೊತೆಗೆ ಬೇರೆ ಬೇರೆ ಕಡೆಗಳಿಂದ ಆಯ್ದ ಸುಮಾರು ೪೦೦ ಇನ್ನೂ ಹೆಚ್ಚಿನ ಬಸವಣ್ಣನವರ ವಚನಗಳೂ ಮೂಲವಚನಗಳ ಪಾಠಾಂತರಗಳೂ ಮತ್ತೆ ಕೆಲವು ಚಿತ್ರಗಳೂ ಸೇರ್ಪಡೆಯಾಗುತ್ತವೆ ಎಂದು ಈ ಸಾಮಾನ್ಯ ಸಂಸ್ಕರಣದ ಮುನ್ನುಡಿಯಲ್ಲಿ ಪ್ರಕಾಶಕರು ಹೇಳಿದ್ದಾರೆ.

ಶಿವೈಕ್ಯರಾದ ಪ್ರೊ॥ ಬಸವನಾಳರು ಸಂಪಾದಿಸಿರುವ ಈ ಗ್ರಂಥ ಶ್ರೀಯುತರ ಆಳವಾದ ವ್ಯಾಸಂಗ, ವಿಶಾಲವಾದ ಅನುಭವ, ಬಹು ಭಾಷಾಪ್ರಭುತ್ವ, ಸಂಶೋಧನಾಸಾಮರ್ಥ್ಯ, ರಚನಾತ್ಮಕ ವಿಮರ್ಶೆ—ಈ ಗುಣಗಳನ್ನು ಎಲ್ಲ ಕಾಲದ ಜನಕ್ಕೂ ಸಾರುವ ಒಂದು ಹೆಬ್ಬೊತ್ತಗೆಯಾಗಿ ನಿಲ್ಲುತ್ತದೆ. ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರ ಈ ಪ್ರಕಟಣೆ ನಾಡಿನಲ್ಲಿ ಮತ್ತೆ ಮತ್ತೆ ಪ್ರಕಟವಾಗಲಿ, ಎಂದು ಆಶಿಸುತ್ತೇನೆ."

ಪುಸ್ತಕ-ಪ್ರಪಂಚ, ಸಂಪುಟ ೬ ಸಂಚಿಕೆ ೧೨

ಜುಲೈ ೧೯೫೨– ಮೈಸೂರು

ಶ್ರೀ. ಎಸ್. ವಿ. ಪರಮೇಶ್ವರಭಟ್ಟ